**Department of Public Instruction in Mysore**

# SUPPLEMENT TO
# GEOGRAPHY OF THE WORLD
## BOOK II

BY

D. NARASIMHAN, M.Sc., B.Com.,
*Mysore Educational Service.*



# ಭೂವಿವರಣೆ
## ಎರಡನೆಯ ಪುಸ್ತಕದ ಸಪ್ಲಿಮೆಂಟ್

ಮೈಸೂರು ವಿದ್ಯಾಭ್ಯಾಸದ ಇಲಾಖೆಯವರಾದ
**ಡಿ. ನರಸಿಂಹನ್,** ಎಂ. ಎಸ್ಸಿ., ಬಿ.ಕಾಂ., ಯವರಿಂದ
ರಚಿಸಲ್ಪಟ್ಟುದು.

ಮೊದಲನೆಯ ಮುದ್ರಣ—೧೦,೦೦೦ ಪ್ರತಿಗಳು

ಬೆಂಗಳೂರು:
ಮೈಸೂರು ಸರ್ಕಾರದ ಮುದ್ರಣಾಲಯದ ಸೂಪರಿಂಟೆಂಡೆಂಟ್‌ರವರಿಂದ
ಮುದ್ರಿಸಲ್ಪಟ್ಟಿತು, ೧೯೩೪

# ಪೀಠಿಕೆ

ಈಗ ಉಪಯೋಗಿಸಲ್ಪಡುತ್ತಿರುವ ಭೂವಿವರಣೆಯ ಎರಡನೆಯ ಪುಸ್ತಕವನ್ನು ಬರೆದು ಹತ್ತು ವರ್ಷಗಳಾದುವು. ಅಂದಿನಿಂದೀಚೆಗೆ ಯೂರೋಪ್, ಏಷ್ಯಾ ಮತ್ತು ಆಫ್ರಿಕಾ ಖಂಡಗಳ ರಾಜಕೀಯ ವಿಭಾಗಗಳಲ್ಲಿ ಅನೇಕ ಬದಲಾವಣೆಗಳಾಗಿರುವುವು. ಅವುಗಳನ್ನು ಈ ವಿಶೇಷ ಸಂಚಿಕೆಯಲ್ಲಿ ಸಂಕ್ಷೇಪವಾಗಿ ವಿವರಿಸಿದೆ. ಈಚೆಗೆ ಕಂಡುಹಿಡಿದ ಅಂಟಾರ್ಟಿಕಾ ಖಂಡದ ವರ್ಣನೆಯೂ ಇದರಲ್ಲಿ ಅಡಕವಾಗಿದೆ.

ಮೈಸೂರು,
25ನೆಯ ಜುಲೈ 1933.

D. NARASIMHAN.

# ವಿಷಯ ಸೂಚಿಕೆ

ಪುಟಗಳು



# ಪಟಗಳು



ಏಷ್ಯಾಖಂಡದ ನೈರುತ್ಯ ದೇಶಗಳು.




ಯೂರೋಪ್ — ಮಹಾಯುದ್ಧವಾದನಂತರ

**ರಾಜ್ಯಗಳ ಹೆಸರುಗಳು.**

1 ಉತ್ತರ ಐರ್ಲೆಂಡ್.
2 ಐರಿಷ್ ಫ್ರೀ ಸ್ಟೇಟ್.
3 ಗ್ರೇಟ್ ಬ್ರಿಟನ್.
4 ಐಸ್ಲೆಂಡ್.
5 ನಾರ್ವೆ.
6 ಸ್ವೀಡನ್.
7 ಫಿನ್‌ಲೆಂಡ್.
8 ಸೋವಿಯೆಟ್ ರಷ್ಯ ಮತ್ತು ಯೂಕ್ರೇನ್.
9 ಎಸ್ಟೋನಿಯ.
10 ಲಾಟ್ವಿಯ.
11 ಲಿಥುಯೇನಿಯ.
12 ಪೋಲೆಂಡ್.
13 ಜರ್ಮನಿ.
14 ಹಾಲೆಂಡ್.
15 ಬೆಲ್ಜಿಯಂ.
16 ಫ್ರಾನ್ಸ್.
17 ಸ್ಪೇನ್.
18 ಪೋರ್ಚುಗಲ್.
19 ಸ್ವಿಟ್ಜರ್ಲೆಂಡ್.
20 ಇಟಲಿ.
21 ಆಸ್ಟ್ರಿಯ.
22 ಚೆಕೊಸ್ಲೊವೇಕಿಯ.
23 ಹಂಗೆರಿ.
24 ಯೂಗೋಸ್ಲಾವಿಯ.
25 ಆಲ್ಬೇನಿಯ.
26 ಗ್ರೀಸ್.
27 ಬಲ್ಗೇರಿಯ.
28 ರೊಮೇನಿಯ
29 ಯೂರೋಪಿನ ಮತ್ತು ಏಷ್ಯದ ಟರ್ಕಿ.
30 ಆಫ್ರಿಕಾ ಖಂಡ.
31 ಏಷ್ಯಾ ಖಂಡ.

**ಸಮುದ್ರಗಳು.**

A. ಕ್ಯಾಸ್ಪಿಯನ್ ಸಮುದ್ರ.
B. ಕಪ್ಪು ಸಮುದ್ರ.
C. ಬಾಲ್ಟಿಕ್ ಸಮುದ್ರ.
D. ಮೆಡಿಟರೇನಿಯನ್ ಸಮುದ್ರ.

**ಸೋವಿಯಟ್ ರಷ್ಯದೊಡನೆ ಸೇರಿರುವ ಪ್ರಜಾಪ್ರಭುತ್ವಗಳು.**

I. ಜಾರ್ಜಿಯ.
II. ಅಜರ್‌ಬೈಜನ್.
III. ಆರ್ಮೀನಿಯ.

1922 ರಲ್ಲಿ ಕೆನಡಾ, ಆಸ್ಟ್ರೇಲಿಯ ದೇಶೀಯರಂತೆ ಸ್ವತಂತ್ರವಾಗಿ ರಾಜ್ಯ ಭಾರ ಮಾಡುವ ಹಕ್ಕನ್ನು ಪಡೆದರು. ಉತ್ತರ ಭಾಗದಲ್ಲಿ ವಾಸಮಾಡುವ ಪ್ರಾಟಿಸ್ಟೆಂಟರು ರೋಮನ್ ಕ್ಯಾಥೋಲಿಕ್ ಪಂಗಡದವರೊಡನೆ ಸೇರಲು ಇಷ್ಟಪಡದ ಕಾರಣ ಐರ್ಲೆಂಡನ್ನು

(i) ಉತ್ತರ ಐರ್ಲೆಂಡು ಮತ್ತು

(ii) ಐರಿಷ್ ಫ್ರೀ ಸ್ಟೇಟ್, ಎಂದು ಎರಡು ಭಾಗ ಮಾಡಿದರು.

ಉತ್ತರ ಐರ್ಲೆಂಡಿನ ಮುಖ್ಯಪಟ್ಟಣ **ಬೆಲ್‌ಫಾಸ್ಟ್** ; ಐರಿಷ್ ಫ್ರೀ ಸ್ಟೇಟಿನ ಮುಖ್ಯಪಟ್ಟಣ ಡಬ್ಲಿನ್. ಐರಿಷ್ ಫ್ರೀ ಸ್ಟೇಟಿನ ಜನಸಂಖ್ಯೆ 30 ಲಕ್ಷ ; ಉತ್ತರ ಐರ್ಲೆಂಡಿನ ಜನಸಂಖ್ಯೆ 12½ ಲಕ್ಷ.

ದೇಶದ ವಾಯುಗುಣವೂ, ಸ್ವಾಭಾವಿಕ ಲಕ್ಷಣಗಳೂ, ಕಲ್ಲಿದ್ದಲಿನ ಅಭಾವವೂ ಪಶುಪಾಲನೆಗೆ ಅನುಕೂಲವಾಗಿವೆ. ಉತ್ತರ ಐರ್ಲೆಂಡಿನಲ್ಲಿ ನಾರುಬಟ್ಟೆಗಳನ್ನು ಮಾಡುವುದು ಮತ್ತು ಹಡಗುಗಳನ್ನು ಕಟ್ಟುವುದು ಮುಖ್ಯವಾದ ಕೈಗಾರಿಕೆಗಳಾಗಿವೆ. ಇವುಗಳಿಗೆ ಬೇಕಾದ ಕಲ್ಲಿದ್ದಲನ್ನು ಸ್ಕಾಟ್ಲೆಂಡಿನಿಂದ ತರಿಸಿಕೊಳ್ಳುತ್ತಾರೆ. ಈಚೆಗೆ ಷ್ಯಾನನ್ ನದಿಗೆ ಅಡ್ಡ ಕಟ್ಟಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡಿಕೊಂಡಿದಾರೆ. ಇದರಿಂದ ಕ್ರಮೇಣ ದೇಶದಲ್ಲಿ ಕೈಗಾರಿಕೆಗಳು ಹೆಚ್ಚುವುವು.

## ಜರ್ಮನಿ

ಮಹಾ ಯುದ್ಧವಾಗುವದಕ್ಕೆ ಮೊದಲು ಜರ್ಮನಿಯು ಚಕ್ರಾಧಿಪತ್ಯವಾಗಿತ್ತು ; ಆದರೆ ದೇಶದಲ್ಲಿ ಉಂಟಾದ ಪರಿವರ್ತನೆಯಿಂದ ಪ್ರಜಾ ಪ್ರಭುತ್ವವೇರ್ಪಟ್ಟಿತು. ಹಿಂದೆ ಆಳಿದ ಕೈಸರ್ ಚಕ್ರವರ್ತಿಯು ಹಾಲೆಂಡ್ ದೇಶದಲ್ಲಿ ವಾಸಮಾಡುತ್ತಾನೆ. ವರ್ಸೇಲ್ಸ್ ಕೌಲಿನ ಪ್ರಕಾರ ಜರ್ಮನಿಯವರು ಫ್ರಾನ್ಸ್, ಡೆನ್‌ಮಾರ್ಕ್ ಮತ್ತು ಪೋಲೆಂಡ್ ದೇಶಗಳಿಗೆ ಕ್ರಮವಾಗಿ

1. ಆಲ್ಸೆಸ್ ಲೊರೇನ್,
2. ಉತ್ತರ ಸ್ಲೆಸ್‌ವಿಗ್,
3. ಪಶ್ಚಿಮ ಪ್ರಷ್ಯ, ಮತ್ತು
4. ಸೈಲಿಷಿಯದ ಮೇಲ್ಭಾಗ,

ಇವುಗಳನ್ನು ಕೊಡಬೇಕಾಯಿತು. ಇದರಿಂದ 1870 ರಲ್ಲಿ ಫ್ರೆಂಚರಿಗೂ, ಜರ್ಮನಿಯವರಿಗೂ ನಡೆದ ಯುದ್ಧದಲ್ಲಿ ಕಳೆದುಕೊಂಡಿದ್ದ ದೇಶಗಳೇ ಫ್ರಾನ್ಸಿಗೆ ಹಿಂತಿರುಗಿ ಬಂದವು. ಇವುಗಳಲ್ಲಿರುವ ಖನಿಜ ಸಂಪತ್ತು ಫ್ರೆಂಚರ ಕೈಗಾರಿಕೆಗಳಿಗೆ ಹೆಚ್ಚು ಅನುಕೂಲತೆಗಳನ್ನು ಒದಗಿಸಿದೆ.

ಪೋಲೆಂಡ್ ದೇಶಕ್ಕೆ ಸಮುದ್ರತೀರವು ದೊರಕುವಂತೆ ಮಾಡಿದ ಏರ್ಪಾಡಿನಿಂದ ಜರ್ಮನಿಗೆ ಸೇರಿದ ಪ್ರಷ್ಯ ಸಂಸ್ಥಾನವು ನಮ್ಮ ಸೀಮೆಯ ಪಾವಗಡ ತಾಲ್ಲೂಕಿನಂತೆ ಬೇರೆಯಾಯಿತು.

ಜರ್ಮನಿಗೆ ಸೇರಿದ ಕಾಲೊನಿಗಳು ಇಂಗ್ಲಿಷ್, ಫ್ರೆಂಚ್ ಅಥವಾ ಜಪಾನ್ ದೇಶಿಯರ ಆಳಿಕೆಗೆ ಒಳಪಟ್ಟಿವೆ.

1918ರಿಂದೀಚೆಗೆ ಸಾಕಾದಷ್ಟು ಆಹಾರ ಸಾಮಗ್ರಿಗಳು ಒದಗದಿರುವುದರಿಂದ ಅವನ್ನು ಅನ್ಯದೇಶಗಳಿಂದ ಆಮದು ಮಾಡಿಕೊಳ್ಳುತ್ತಾರೆ. ರಫ್ತಾಗುವ ಪದಾರ್ಥಗಳಲ್ಲಿ ಯಂತ್ರಗಳಿಂದ ತಯಾರಿಸಿದ ವಸ್ತುಗಳೇ ಹೆಚ್ಚು.

ಯುದ್ಧದಿಂದ ಬಹಳ ತೊಂದರೆಗಳುಂಟಾಗಿದ್ದರೂ ಸ್ವಲ್ಪಕಾಲದಲ್ಲಿಯೇ ದೇಶವು ಮೊದಲಿನ ಸ್ಥಿತಿಗೆ ಬರಲು ಬೇಕಾದ ಪ್ರಯತ್ನಗಳು ನಡೆಯುತ್ತಿವೆ. ಜರ್ಮನರು ಬುದ್ಧಿಕುಶಲತೆಯನ್ನುಪಯೋಗಿಸಿ ಮುಂದಾಳಾಗಿ ನಿಲ್ಲುವ ಜನರು. ವಿದ್ಯಾಭ್ಯಾಸಕ್ಕೆ ಬೇಕಾದ ಸೌಕರ್ಯಗಳನ್ನು ಕಲ್ಪಿಸಿರುವರು. ಇವರು ಕೆಲವು ವರ್ಷಗಳಿಂದೀಚೆಗೆ ಇಂಡಿಯಾ ದೇಶದ ವಿದ್ಯಾವಂತರಿಗೆ ವೇತನಗಳನ್ನು ಕೊಟ್ಟು ತಮ್ಮ ವಿಶ್ವವಿದ್ಯಾನಿಲಯಗಳಲ್ಲಿ ವ್ಯಾಸಂಗ ಮಾಡಲು ಅನುಕೂಲಪಡಿಸಿರುತ್ತಾರೆ.

ಜರ್ಮನಿಯಲ್ಲಿ ರಸಾಯನ ಶಾಸ್ತ್ರವೂ, ಕಾಡುಗಳನ್ನು ಶಾಸ್ತ್ರರೀತ್ಯಾ ಸಂರಕ್ಷಿಸುವ ವಿಚಕ್ಷಣೆಯೂ, ಹೆಸರುಗೊಂಡಿವೆ. ನಮ್ಮ ಸೀಮೆಯ ಫಾರೆಸ್ಟ್ ಇಲಾಖೆಯ ಹುದ್ದೇದಾರರು ಅಲ್ಲಿನ ಪದ್ಧತಿಗಳನ್ನು ಅಭ್ಯಾಸಮಾಡಲೆಂದು ನಮ್ಮ ಸರ್ಕಾರದವರು ಅವರನ್ನು ಕಳುಹಿಸುವರು.

## ಪೋಲೆಂಡ್

ಅಫ್ಘಾನಿಸ್ಥಾನವು ರಷ್ಯ ಮತ್ತು ಇಂಡಿಯಾ ದೇಶಗಳ ಮಧ್ಯೆ ಇದ್ದು ಅವುಗಳ ವೈರದ ಸಂಭವವನ್ನು ತಪ್ಪಿಸುವ ತಟಸ್ಥ ರಾಜ್ಯವಾಗಿದೆಯಷ್ಟೆ.

ಅದರಂತೆಯೇ ಪೋಲೆಂಡ್ ಜರ್ಮನಿಗೂ ರಷ್ಯಾಕ್ಕೂ ಮಧ್ಯೆಯಿರುವ ದೇಶವಾಗಿದೆ. ಇದು ಯೂರೋಪಿನ ಮಹಾ ಮೈದಾನಕ್ಕೆ ಸೇರಿದ ಭಾಗ; ಮುಖ್ಯವಾದ ನದಿ ವಿಶ್ಚುಲ.

ಸ್ವಾಭಾವಿಕ ಎಲ್ಲೆಗಳು ಇಲ್ಲದಕಾರಣ, ಮಹಾ ಯುದ್ಧವು ಕೊನೆಗಾಣುವ ತನಕ, ಪೋಲೆಂಡ್ ದೇಶವು ರಷ್ಯ, ಜರ್ಮನಿ ಮತ್ತು ಆಸ್ಟ್ರಿಯ ಚಕ್ರಾಧಿಪತ್ಯಗಳಲ್ಲಿ ಸೇರಿಹೋಗಿತ್ತು. ಇದರ ಜನಸಂಖ್ಯೆ 3 ಕೋಟಿ; ವಿಸ್ತೀರ್ಣದಲ್ಲಿ ಬ್ರಿಟಿಷ್ ದ್ವೀಪಗಳ $1\frac{1}{4}$ರಷ್ಟಿದೆ. ಚೆಕೊಸ್ಲೊವೇಕಿಯದಂತೆ ಇಲ್ಲಿಯೂ ಪ್ರಜಾಪ್ರಭುತ್ವವು ನೆಲಸಿದೆ.

ಜರ್ಮನಿಯ ಉತ್ತರ ಭಾಗದ ಸ್ವಾಭಾವಿಕ ಲಕ್ಷಣಗಳು ಇಲ್ಲಿಯೂ ಕಂಡುಬರುತ್ತವೆ; ಬೆಳೆಗಳು ಅದರಂತೆಯೆ ಆಗುವುವು. ವಾಯುಗುಣದಲ್ಲಿ ಶೀತೋಷ್ಣಗಳ ವ್ಯತ್ಯಾಸವು ಸ್ವಲ್ಪ ಹೆಚ್ಚಾಗಿ ಕಂಡುಬರುವುದು.

ದಕ್ಷಿಣದಲ್ಲಿ ಫಲವತ್ತಾದ ಭೂಮಿಯಿದೆ. ರೈ, ಓಟ್ಸ್, ಗೋಧಿ, ಬಾರ್ಲಿ ಮತ್ತು ಬೀಟ್‌ರೂಟ್ ಇವು ಪೋಲೆಂಡಿನ ಮುಖ್ಯ ಬೆಳೆಗಳು.

ಕಲ್ಲಿದ್ದಲು, ಕಬ್ಬಿಣ, ಸತುವು, ಸೀಸ, ಉಪ್ಪು, ಎಣ್ಣೆ ಇವು ಸಿಕ್ಕುವುವು. ಖನಿಜ ಸಂಪತ್ತಿರುವ ದಕ್ಷಿಣಭಾಗದಲ್ಲಿ **ಲಾಡ್ಜ್, ಕ್ರಾಕೊ, ಲೆಂಬರ್ಗ್** ಎಂಬ ಮುಖ್ಯ ಪಟ್ಟಣಗಳಿವೆ. ಕೈಗಾರಿಕೆಗಳು ಇಲ್ಲಿಯೇ ನೆಲಸಿವೆ.

**ಪಟ್ಟಣಗಳು.—ವಾರ್ಸ**—ಇದು ದೇಶದ ರಾಜಧಾನಿ ಮತ್ತು ವ್ಯಾಪಾರಕ್ಕೆ ಮುಖ್ಯ ಪಟ್ಟಣ; ರೈಲುಮಾರ್ಗಗಳಿಗೆ ಕೇಂದ್ರಸ್ಥಾನವಾಗಿದೆ. ಲೋಹದ ಸಾಮಾನುಗಳೂ ಬಟ್ಟೆಗಳೂ ತಯಾರಾಗುವುವು. ಲಾಡ್ಜಿನಲ್ಲಿ ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳನ್ನು ನೇಯುವರು.

**ವ್ಯಾಪಾರ.**—ಪೋಲೆಂಡಿಗೆ ತೀರ ಪ್ರದೇಶವು ಬಹಳ ಕಡಿಮೆ. **ಡಾನ್‌ಜಿಗ್** ಸ್ವಾಭಾವಿಕವಾದ ಬಂದರಾಗಿದ್ದರೂ ಅದು ಜನಾಂಗಗಳ ಸಂಘದ (League of Nations) ವಿಚಾರಣೆಗೆ ಒಳಪಟ್ಟ ಸ್ವತಂತ್ರ ಪಟ್ಟಣವಾಗಿರುತ್ತದೆ. ಆದುದರಿಂದ ಪೋಲೆಂಡಿನವರು **ಗಿಡ್ನಿಯ**ದಲ್ಲಿ ಅನುಕೂಲವಾದ ಬಂದರನ್ನು ಅಭಿವೃದ್ಧಿಪಡಿಸುತ್ತಿದಾರೆ.

ತೊಲೆ, ಕಲ್ಲಿದ್ದಲು, ಬಟ್ಟೆಗಳು, ಲೋಹದ ಸಾಮಾನುಗಳು, ಹಂದಿಗಳು, ಕೋಳಿಯ ಮೊಟ್ಟೆಗಳು ಮತ್ತು ಸಕ್ಕರೆ ಇವು ರಫ್ತಾಗುತ್ತವೆ. ಕಲ್ಲಿದ್ದಲಿನ ವ್ಯಾಪಾರದಲ್ಲಿ ಪೋಲೆಂಡು ಇಂಗ್ಲೆಂಡಿನೊಡನೆ ಪೋಟಾಪೋಟಿ ಮಾಡುತ್ತಿದೆ.

**ಫಿನ್‌ಲೆಂಡ್ ಮತ್ತು ಬಾಲ್ಟಿಕ್ ರಾಜ್ಯಗಳು.**—ರಷ್ಯಾ ಚಕ್ರಾಧಿಪತ್ಯವು ಬಾಲ್ಟಿಕ್ ಸಮುದ್ರತೀರದಿಂದ ಫೆಸಿಫಿಕ್ ಸಾಗರದವರೆಗೂ ವಿಸ್ತರಿಸಿತ್ತು. 1917 ರಲ್ಲಿ ನಡೆದ ಪರಿವರ್ತನೆಯಿಂದ ಕೆಲವು ಭಾಗಗಳು ಸ್ವತಂತ್ರವಾದುವು. ಹೀಗೆ ಸ್ವಾತಂತ್ರ್ಯವನ್ನು ಪಡೆದ ಫಿನ್‌ಲೆಂಡ್, ಎಸ್ತೋನಿಯ, ಲಾಟ್ವಿಯ ಮತ್ತು ಲಿಥುಯೇನಿಯ ಎಂಬ ರಾಜ್ಯಗಳು ಬಾಲ್ಟಿಕ್ ಸಮುದ್ರದ ಪೂರ್ವ ತೀರದಲ್ಲಿವೆ.

**ಫಿನ್‌ಲೆಂಡ್.**—ಫಿನ್‌ಲೆಂಡ್ ದೇಶವು ಒಂದು ಶತಮಾನದ ಹಿಂದೆ ಸ್ವೀಡನ್ನಿಗೆ ಸೇರಿತ್ತು. 1809 ರಲ್ಲಿ ಅದು ರಷ್ಯದವರ ವಶವಾಯಿತು; 1919 ರಲ್ಲಿ ಸ್ವತಃ ರಾಜ್ಯಭಾರ ಮಾಡಲು ಅವಕಾಶ ದೊರೆಯಿತು.

ವಿಸ್ತೀರ್ಣದಲ್ಲಿ ಬ್ರಿಟಿಷ್ ದ್ವೀಪಗಳಿಗಿಂತ ಸ್ವಲ್ಪದೊಡ್ಡದಾದರೂ, ಲಂಡರ್ನ ಪಟ್ಟಣದಲ್ಲಿ ವಾಸಮಾಡುವಷ್ಟು ಜನರೂ ಈ ದೇಶದಲ್ಲಿಲ್ಲ.

ದೇಶಗಳಲ್ಲಿ ಕಾಡುಗಳೇ ಅರ್ಧಭಾಗವನ್ನು ಆಕ್ರಮಿಸಿವೆ. ಮರಗಳನ್ನು ಕಡಿಯುವುದೂ, ಅವುಗಳ ತಿರುಳನ್ನು (Pulp) ತೆಗೆದು ಕಾಗದ ಮಾಡುವುದೂ ಮುಖ್ಯ ಕೈಗಾರಿಕೆಗಳು. ಕಾಡುಗಳಿಗೆ ಬೆಂಕಿಬಿದ್ದಾಗ ದೇಶಕ್ಕೆ ಕ್ಷೋಭೆಯುಂಟಾಗುವುದು.

ಗರಗಸದ ಯಂತ್ರಗಳನ್ನು ನಡೆಯಿಸುವುದಕ್ಕೆ ಜಲಪಾತಗಳಿಂದುಂಟಾಗುವ ವಿದ್ಯುಚ್ಛಕ್ತಿಯನ್ನು ಉಪಯೋಗಿಸುವರು.

ದೇಶದ ಆಗ್ನೇಯಭಾಗದಲ್ಲ ಓಟ್ಸ್, ರೈ ಮತ್ತು ಆಲೂಗಡ್ಡೆಯನ್ನು ಬೆಳೆಯುತ್ತಾರೆ. ಕೃಷಿಗಿಂತ ಪಶುಪಾಲನೆಯೇ ಮುಖ್ಯವಾಗಿದೆ. ಈ ವಿಚಾರದಲ್ಲಿ ಫಿನ್‌ಲೆಂಡು ಡೆನ್‌ಮಾರ್ಕನ್ನು ಹೋಲುವುದು.

**ಹೆಲ್‌ಸಿಂಗ್‌ಫರ್ಸ್.**—ಇದು ದೇಶದ ರಾಜಧಾನಿ ಮತ್ತು ಒಂದು ರೇವು ಪಟ್ಟಣ.

**ಎಸ್ತೋನಿಯ, ಲಾಟ್ವಿಯ ಮತ್ತು ಲಿಥುಯೇನಿಯ.**—ಈ ಮೂರು ರಾಜ್ಯಗಳು ಫಿನ್‌ಲೆಂಡ್ ಕೊಲ್ಲಿಯ ದಕ್ಷಿಣದಲ್ಲಿವೆ. ಹಿಂದೆ ಇವುಗಳ ಪ್ರದೇಶವೆಲ್ಲಾ ಕಾಡಾಗಿತ್ತು. ಈಗ ಪ್ರತಿ ರಾಜ್ಯದಲ್ಲಿಯೂ ಸಾಕಾದಷ್ಟು ಮರಗಳಿವೆ. ಅನೇಕ ಜನರು ಅವುಗಳಿಗೆ ಸಂಬಂಧಪಟ್ಟ ಕೈಗಾರಿಕೆಗಳಿಂದ ಜೀವಿಸುತ್ತಾರೆ. **ರಿವಾಲ್, ರೀಗಾ** ಮತ್ತು **ಮೆಮೆಲ್** ಬಂದರುಗಳಿಂದ ಮರವು ರಫ್ತಾಗುವುದು.

ಇನ್ನು ಕೆಲವರು ಕೃಷಿ, ಪಶುಪಾಲನೆ ಮತ್ತು ಕೋಳಿಗಳನ್ನು ಪೋಷಿಸುವ ಕೆಲಸಗಳನ್ನು ಮಾಡುವರು. ನಾರನ್ನು ಬೆಳೆದು ಅದನ್ನು ರಫ್ತು ಮಾಡುವುದು ವಾಡಿಕೆಯಾಗಿದೆ. ಫಿನ್‌ಲೆಂಡಿನಂತೆ ರೈ, ಓಟ್ಸ್ ಮತ್ತು **ಆಲುಗಡ್ಡೆಯೂ ಇಲ್ಲಿ ಬೆಳೆಯುವುವು.**

ಬಾಲ್ಟಿಕ್ ತೀರದಲ್ಲಿರುವ ದೇಶಗಳಲ್ಲಿ ಗಿಣ್ಣು, ಬೆಣ್ಣೆ, ಮತ್ತು ಮರ ಇವು ಮುಖ್ಯವಾದ ಉತ್ಪನ್ನಗಳು (Products).

## ಚೆಕೊಸ್ಲೊವೇಕಿಯ

ಮಹಾ ಯುದ್ಧವಾದ ನಂತರ ಜರ್ಮನಿ ಮತ್ತು ರಷ್ಯ ಚಕ್ರಾಧಿಪತ್ಯಗಳು ವಿಸ್ತೀರ್ಣದಲ್ಲಿ ನಷ್ಟವನ್ನು ಹೊಂದಿರುವಂತೆ, ಆಸ್ಟ್ರಿಯ ಹಂಗೇರಿ ಚಕ್ರಾಧಿಪತ್ಯವು ಒಡೆದು ಆಸ್ಟ್ರಿಯ ಮತ್ತು ಹಂಗೇರಿ ಎಂಬ ಬೇರೆ ಬೇರೆ ದೇಶಗಳಾದುವಲ್ಲದೆ, ಚೆಕೊಸ್ಲೊವೇಕಿಯವೆಂಬ ಹೊಸ ದೇಶವೂ ಏರ್ಪಟ್ಟಿತು.

ಚೆಕೊಸ್ಲೊವೇಕಿಯವು ಜರ್ಮನಿ ಮತ್ತು ಪೋಲೆಂಡಿನ ದಕ್ಷಿಣ ಭಾಗದಲ್ಲಿದೆ. ಇದು ಸುಮಾರು ಮೈಸೂರಿನ ಮೂರರಷ್ಟಿದೆ. ಆಕಾರದಲ್ಲಿ ವಕ್ರವಾಗಿದ್ದರೂ ಇದರ ಸನ್ನಿವೇಶವು ಅನೇಕ ಅನುಕೂಲತೆಗಳನ್ನು ಪಡೆದಿದೆ. ಇವು ಯಾವುವೆಂದರೆ:—ಯೂರೋಪಿನ ಮಧ್ಯ ಭಾಗದಲ್ಲಿರುವಿಕೆ, ಫಲವತ್ತಾದ ಮಣ್ಣು, ಗಿಡಗಳಿಂದ ತುಂಬಿದ ದೊಡ್ಡ ಕಾಡುಗಳು ಮತ್ತು ಅಮೂಲ್ಯವಾದ ಖನಿಜ ಸಂಪತ್ತು. ಸಮುದ್ರವು ದೂರವಾಗಿದ್ದರೂ ಎಲ್ಬ್ ಮತ್ತು ಓಡರ್ ನದಿಗಳ ಮಾರ್ಗವಾಗಿ ತೆರಿಗೆಗಳನ್ನು ಕೊಡದೆ **ಹ್ಯಾಂಬರ್ಗ್, ಸ್ಟೆಟಿನ್** ರೇವುಪಟ್ಟಣಗಳ ಮೂಲಕ ವ್ಯಾಪಾರ ಮಾಡುವ ಹಕ್ಕನ್ನು ಪಡೆದಿದೆ.

ಚೆಕೊಸ್ಲೊವೇಕಿಯವನ್ನು ಬೊಹಿಮಿಯ, ಮೊರೇವಿಯ ಮತ್ತು ಸ್ಲೊವೇಕಿಯ ಎಂದು ಮೂರು ವಿಭಾಗ ಮಾಡಬಹುದು. $\frac{2}{5}$ ಭಾಗ ಜನರು ವ್ಯವಸಾಯದಿಂದ ಜೀವಿಸುತ್ತಾರೆ. ಇತರ ಕೈಗಾರಿಕೆಗಳೂ ಅಭಿವೃದ್ಧಿಯನ್ನು ಹೊಂದಿ ಹೆಸರುವಾಸಿಯಾಗಿವೆ.

**ಬೆಳೆಗಳು, ಖನಿಜ ಸಂಪತ್ತು ಮತ್ತು ಜನಸಾಂದ್ರತೆ.**—ರೈ, ಓಟ್ಸ್, ಗೋಧಿ, ಆಲೂಗಡ್ಡೆ, ಬಾರ್ಲಿ ಮತ್ತು ಬೀಟ್‌ರೂಟ್ ಇವು ಮುಖ್ಯ

ವಾದ ಬೆಳೆಗಳು. ಬೊಹಿಮಿಯದಲ್ಲಿ ಕಲ್ಲಿದ್ದಲು ಹೇರಳವಾಗಿ ಸಿಕ್ಕುವ ದಲ್ಲದೆ ವಿದ್ಯುಚ್ಛಕ್ತಿಗೆ ಬೇಕಾದ ನೀರಿನ ವಸತಿಯೂ ಇದೆ. ಕೈಗಾರಿಕೆಗ ಳಿಗೆ ಬೇಕಾದ ಇತರ ಪದಾರ್ಥಗಳೂ ದೊರೆಯುವುವು. ಇಲ್ಲಿನ ಜನರಿಗೆ ಕೈಗಾರಿಕೆಗಳೇ ಮುಖ್ಯೋದ್ಯೋಗ. ದೇಶದ ಜನಸಂಖ್ಯೆಯು (1,40,00,000) $\frac{3}{5}$ ಭಾಗ ಜನರು ಬೊಹಿಮಿಯದಲ್ಲಿ ವಾಸಮಾಡು ತ್ತಾರೆ. ಮೊರೇವಿಯದಲ್ಲಿ ಜನರು ಕೈಗಾರಿಕೆ ಮತ್ತು ಕೃಷಿಗಳಿಂದ ಜೀವಿ ಸುತ್ತಾರೆ. ಕಾಡುಗಳು ಹೆಚ್ಚಾಗಿರುವುದರಿಂದ ಸ್ಲೊವೇಕಿಯದಲ್ಲಿ ಜನ ಸಾಂದ್ರತೆ ಕಡಿಮೆ; ಸಂಪದಭಿವೃದ್ಧಿಯಲ್ಲಿ ಹಿಂದುಳಿದಿದೆ.

ಪ್ರಹದ (ಪ್ರೇಗ್) ಹತ್ತಿರ ದನ ಮತ್ತು ಹಂದಿಗಳನ್ನು ಸಾಕುತ್ತಾರೆ. ಪ್ರಾಣಿಗಳ ತೊಗಲಿನಿಂದ ಬೂಟ್ಸುಗಳನ್ನೂ ಕೈ ಚೀಲಗಳನ್ನೂ ಮಾಡಿ ಅನ್ಯ ದೇಶಗಳಿಗೆ ರಫ್ತು ಮಾಡುತ್ತಾರೆ.

ಪ್ರಹ.—ಇದು ಈ ದೇಶದ ಮುಖ್ಯಪಟ್ಟಣ. ಎಲ್ಬ ಉಪನದಿಯ ದಡದಲ್ಲಿದೆ. ಇಲ್ಲಿ ರೈಲು ಮಾರ್ಗಗಳು ಸೇರುವುವು. ಅನೇಕ ಕೈಗಾರಿಕೆ ಗಳೂ ನಡೆಯುತ್ತವೆ.

## ಆಸ್ಟ್ರಿಯ

ಮಹಾ ಯುದ್ಧವಾದ ಮೇಲೆ ಜನಾಂಗಗಳನ್ನನುಸರಿಸಿ ದೇಶದ ಎಲ್ಲೆಗಳನ್ನು ಬದಲಾಯಿಸಿದರು. ಹೀಗೆ ಮಾಡಿದುದರಿಂದ ಈಗಿನ ಆಸ್ಟ್ರಿ ಯವು ವಿಸ್ತೀರ್ಣದಲ್ಲಿ ಚಿಕ್ಕದಾಯಿತು. ಇದು ಮೈಸೂರಿಗಿಂತ ಸ್ವಲ್ಪ ದೊಡ್ಡದು. ಜನಸಂಖ್ಯೆ 65 ಲಕ್ಷ. ಇದರ ಪೈಕಿ 20 ಲಕ್ಷ ಜನರು ವಿಯ ನ್ನದಲ್ಲಿ ವಾಸಮಾಡುತ್ತಾರೆ.

ಆಸ್ಟ್ರಿಯದ $\frac{4}{5}$ ಭಾಗವು ಪರ್ವತಮಯವಾಗಿದೆ. ಇದು ಸ್ವಿಟ್ಸ ರ್ಲೆಂಡನ್ನು ಬಹುಮಟ್ಟಿಗೆ ಹೋಲುತ್ತದೆ. ಇಲ್ಲಿನ ಟೈರೋಲ್ ಪ್ರಾಂತ ವನ್ನು ನೋಡಲು ಪ್ರತಿ ವರ್ಷವೂ ಬಹಳ ಜನರು ಬರುವರು.

ವ್ಯವಸಾಯ, ಕೈಗಾರಿಕೆ ಇವು ಮುಖ್ಯೋದ್ಯೋಗಗಳು. ಸಾಕಾ ದಷ್ಟು ಆಹಾರ ಸಾಮಗ್ರಿಗಳು ದೇಶದಲ್ಲಿ ಒದಗುವುದಿಲ್ಲ. ಇವುಗಳನ್ನು ಹೊರಗಿನಿಂದ ಪಡೆಯುವುದಕ್ಕೆ ದೇಶದ ಖನಿಜಗಳನ್ನು ತೆಗೆದು, ಕಾಡಿನಲ್ಲಿ ಸಿಕ್ಕುವ ಮರಗಳನ್ನು ಉಪಯೋಗಿಸಿ ಸಾಮಾನುಗಳನ್ನು ಮಾಡಿ ಕಳುಹಿಸ

ಬೇಕು. ರಫ್ತಾಗುವ ಪದಾರ್ಥಗಳಾವುವೆಂದರೆ : ಮರದ ದಿಮ್ಮಿಗಳು, ಮರದ ಸಾಮಾನು, ಖನಿಜಗಳ ಅದುರು, ಸಕ್ಕರೆ, ಹಣ್ಣು ಮತ್ತು ರಸಾಯನಿಕ ಸಾಮಾನುಗಳು (Chemicals).

**ವಿಯನ್ನ.**—'ಆಸ್ಟ್ರಿಯಾ ದೇಶಕ್ಕೆ ರಾಜಧಾನಿಯಾದ ಈ ಪಟ್ಟಣವು ಪ್ರಪಂಚದ ಮುಖ್ಯವಾದ ಪಟ್ಟಣಗಳಲ್ಲಿ ಒಂದಾಗಿದೆ.' ಇದು ಬಹು ಕಾಲದಿಂದ ಸಂಗೀತ, ಚಿತ್ರಕಲೆ ಮತ್ತು ವೈದ್ಯಕ್ಕೆ ಪ್ರಸಿದ್ಧವಾದ ಸ್ಥಳವಾಗಿದೆ. ಇಲ್ಲಿರುವ ಕಾಲೇಜುಗಳೂ, ಪಾರ್ಕುಗಳೂ, ಕಟ್ಟಡಗಳೂ, ಮ್ಯೂಸಿಯಂಗಳೂ ಪ್ರಖ್ಯಾತಿಯನ್ನು ಹೊಂದಿವೆ. ಗುಣಹೊಂದಲು ಕಷ್ಟಕರವಾದ ರೋಗಗಳ ನಿವಾರಣೆಗೆ ಅನ್ಯದೇಶದ ಜನರು ವಿಯನ್ನಕ್ಕೆ ಹೋಗುವರು. ಇಲ್ಲಿ ಬಟ್ಟೆಗಳನ್ನು ನೇಯುವದೂ, ಮರದ ಸಾಮಾನುಗಳನ್ನು ಮಾಡುವದೂ, ಪಿಯಾನೊಗಳನ್ನು ತಯಾರಿಸುವುದು ಮತ್ತು ಹಡಗುಗಳನ್ನು ಕಟ್ಟುವುದು, ಇವುಗಳು ಈಗಲೂ ನಡೆಯುತ್ತವೆ.

## ಹಂಗೆರಿ

ಹಂಗೆರಿಯು ಆಸ್ಟ್ರಿಯಕ್ಕೆ ಪೂರ್ವದಿಕ್ಕಿನಲ್ಲಿದೆ. ಈ ಎರಡು ದೇಶಗಳಿಗೂ ಬಹಳ ವ್ಯತ್ಯಾಸಗಳು ಕಂಡುಬರುವುವು. ಆಸ್ಟ್ರಿಯ ಪರ್ವತಮಯವಾದ ಸೀಮೆ. ಹಂಗೆರಿಯು ಮರಗಳಿಲ್ಲದ ಮೈದಾನ ಪ್ರದೇಶ; ಇಲ್ಲಿ ಖನಿಜಗಳು ಸಿಕ್ಕುವುದು ಕಡಿಮೆ. ವ್ಯವಸಾಯವೇ ಮುಖ್ಯೋದ್ಯೋಗ; ದೇಶದಲ್ಲಿ ನಡೆಯುವ ಕೈಗಾರಿಕೆಗಳು ಇದನ್ನನುಸರಿಸಿವೆ.

ಹಂಗೆರಿಯ ವಿಸ್ತೀರ್ಣ 35,875 ಚ. ಮೈ. ಗಳು; ಜನಸಂಖ್ಯೆ 80 ಲಕ್ಷ. ಮುಖ್ಯಪಟ್ಟಣವಾದ ಬೂಡಾಪೆಸ್ಟಿನಲ್ಲಿ 10 ಲಕ್ಷ ಜನರಿರುವರು.

ಹಂಗೆರಿಯ ಮೈದಾನದಲ್ಲಿ ಹೆಚ್ಚಾಗಿ ದನ, ಕುದುರೆ, ಹಂದಿ ಮತ್ತು ಕುರಿಗಳನ್ನು ಸಾಕುವರು. ವಾಯುಗುಣವೂ ಭೂಮಿಯೂ ಗೋಧಿ ಮತ್ತು ಜೋಳದ ಬೆಳೆಗೆ ತಕ್ಕುವಾಗಿವೆ. ರೈ, ಬಾರ್ಲಿ, ಬೀಟ್‌ರೂಟ್ ಇವನ್ನು ಬೆಳೆಯುತ್ತಾರೆ. ಗೋಧಿಯೇ ಮುಖ್ಯವಾದ ಧಾನ್ಯ. ರಷ್ಯವನ್ನು ಬಿಟ್ಟರೆ ಹಂಗೆರಿಯಲ್ಲಿಯೆ ಹೆಚ್ಚು ಗೋಧಿಯ ಬೆಳೆಯಾಗುತ್ತದೆ. ಇದರಿಂದಲೇ ಈ ದೇಶಕ್ಕೆ 'ಯೂರೋಪಿನ ಕಣಜ' ವೆಂದು ಹೆಸರು ಬಂದಿದೆ.

ಹಂಗೇರಿಯಿಂದ ರಫ್ತಾಗುವ ಪದಾರ್ಥಗಳು ಅದರ ಸಂಪತ್ತನ್ನು ವ್ಯಕ್ತಪಡಿಸುತ್ತವೆ. ಇವು ಯಾವುವೆಂದರೆ : ಗೋಧಿ, ಪ್ರಾಣಿಗಳು, ಹಿಟ್ಟು, ಕೋಳಿಮೊಟ್ಟೆ, ಸಕ್ಕರೆ, ಮಾಂಸ ಮತ್ತು ಜೋಳ.

**ಬೂಡಾಫೆಸ್ಟ್.**—ಇದು ಹಂಗೇರಿಯದ ರಾಜಧಾನಿ. ಡಾನ್ಯೂಬ್ ನದಿಯ ಎರಡು ದಡಗಳಲ್ಲಿರುವ **ಬೂಡಾ** ಮತ್ತು **ಫೆಸ್ಟ್** ಸೇರಿ ಬೂಡಾ ಫೆಸ್ಟ್ ಆಗಿದೆ. ಇದು ಹಂಗೇರಿಯ ಮೈದಾನದ ಮಧ್ಯಭಾಗದಲ್ಲಿರುವುದ ರಿಂದ ಪ್ರಾಮುಖ್ಯತೆಗೆ ಬಂತು. ಇಲ್ಲಿ ಹಿಟ್ಟನ್ನು ತಯಾರಿಸುವ ತೊಗಲಿನ ಸಾಮಾನುಗಳನ್ನೂ ಮತ್ತು ವ್ಯವಸಾಯಕ್ಕೆ ಬೇಕಾದ ಯಂತ್ರಗಳನ್ನೂ ಮಾಡುವ ಕಾರ್ಖಾನೆಗಳಿವೆ.

## ಸೋವಿಯೆಟ್ ರಷ್ಯ

1917ರಲ್ಲಿ ನಡೆದ ಪರಿವರ್ತನೆಯಿಂದ ರಷ್ಯದ ರಾಜಕೀಯ ಸ್ಥಿತಿಯು ಬದಲಾಯಿಸಿತು. ಸಾರ್ ಚಕ್ರವರ್ತಿಯವರ ನಿರಂಕುಶ ಪ್ರಭು ತ್ವವು ಕೊನೆಗೊಂಡು ಪ್ರಜಾ ಪ್ರಭುತ್ವವು ಏರ್ಪಟ್ಟಿತು. ರಾಜ್ಯಭಾರ ಕ್ರಮದಲ್ಲಿ ಒಂದು ಹೊಸ ಪದ್ಧತಿಯು ಆಚರಣೆಗೆ ಬಂದಿತು. ಅದುವರೆಗೆ ಅಧಿಕಾರಮಾಡುತ್ತಿದ್ದ ಶ್ರೀಮಂತರು ಮತ್ತು ವಿದ್ಯಾವಂತರಿಗೆ ಬದಲಾಗಿ ದೇಶದಲ್ಲಿರುವ ಕೆಲಸಗಾರರ, ಸೈನಿಕರ ಮತ್ತೂ ರೈತರ ಸಂಘ (Soviet) ಗಳಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳು ಆಡಳಿತ ಮಾಡುತ್ತಾರೆ. ಇದ ರಿಂದಲೇ ರಷ್ಯಕ್ಕೆ ಸೋವಿಯೆಟ್ ರಷ್ಯವೆಂಬ ಹೆಸರು ಬಂದಿದೆ.

ರಷ್ಯಕ್ಕೆ ಏಷ್ಯಾದಲ್ಲಿ ಸೈಬೀರಿಯ ಮತ್ತು ಇತರ ಭಾಗಗಳು ಸೇರಿವೆ ; ಒಟ್ಟು ಪ್ರದೇಶದ ವಿಸ್ತೀರ್ಣ 82,40,500 ಚ. ಮೈ ಯೂರೋಪಿನ ರಷ್ಯವು ಯೂರೋಪ್ ಖಂಡದ ದೇಶಗಳಲ್ಲೆಲ್ಲಾ ಹೆಚ್ಚು ವಿಸ್ತೀರ್ಣವಿರುವ ದೇಶ. ಇದು ಬ್ರಿಟಿಷ್ ದ್ವೀಪಗಳ 13ರಷ್ಟು, ಇಂಡಿ ಯಾಕ್ಕಿಂತ ಸ್ವಲ್ಪ ಚಿಕ್ಕದಾಗಿಯೂ ಇದೆ. ಇದರ ಜನಸಂಖ್ಯೆ 14 ಕೋಟಿ. ಹೆಚ್ಚು ಜನರು ವ್ಯವಸಾಯದಿಂದ ಜೀವಿಸುತ್ತಾರೆ.

ಈಗಿನ ಆಡಳಿತದಲ್ಲಿರುವ ಒಂದು ವಿಶೇಷ ಸಂಗತಿಯನ್ನು ನೆನಪಿನ ಲ್ಲಿಡಬೇಕು. ಖಾಸಗಿ ಜನರಿಗೆ ಸ್ವಂತ ಆಸ್ತಿಯ ಹಕ್ಕಿರಕೂಡದು. ಕ್ರಮೇಣ ಎಲ್ಲವೂ ಸೋವಿಯೆಟ್ ರಷ್ಯಕ್ಕೆ ಸೇರಬೇಕು, ಎಂಬ ಧ್ಯೇಯವನ್ನಿಟ್ಟುಕೊಂಡು

ಸರ್ಕಾರದವರು ಪ್ರವರ್ತಿಸುತ್ತಿದಾರೆ. ಆದರೆ ಅದನ್ನು ಸಂಪೂರ್ಣವಾಗಿ ನಡೆಯಿಸಲು ಸಾಧ್ಯವಾಗಿಲ್ಲ. ಈ ಅಭಿಮತವು ಪಟ್ಟಣ ನಿವಾಸಿಗಳಲ್ಲಿ ವಿನಾ ಗ್ರಾಮಾಂತರದ ರೈತಾಬಿ ಜನರಲ್ಲಿಲ್ಲ. ಊರುಗಳಲ್ಲಿರುವವರು ಅನ್ಯದೇಶಗಳಿಂದ ಆಹಾರ ಸಾಮುಗ್ರಿಗಳನ್ನು ತರಿಸಿಕೊಳ್ಳುವದಕ್ಕೆ ಬೇಕಾದಷ್ಟು ಸಾಮಾನುಗಳನ್ನು ತಯಾರುಮಾಡಿ ಕಳುಹಿಸಲು ಅಶಕ್ತರಾಗಿದಾರೆ. ಆದುದರಿಂದ ಸೋವಿಯೆಟ್ ಸರ್ಕಾರದವರು ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವದಕ್ಕೆ ಬಹಳ ಶ್ರಮ ತೆಗದುಕೊಳ್ಳುತ್ತಿದಾರೆ.

ಸೋವಿಯೆಟ್ ರಷ್ಯದಲ್ಲಿ ನಡೆಯುತ್ತಿರುವ ಏರ್ಪಾಡುಗಳನ್ನು ಇನ್ನಾವ ದೇಶದವರೂ ಅನುಸರಿಸಿಲ್ಲ. ತಮ್ಮ ಪ್ರಜೆಗಳು ರಷ್ಯದ ಉತ್ಪನ್ನಗಳನ್ನು ಕೊಳ್ಳದಿರುವಂತೆ ಅನ್ಯ ದೇಶೀಯರು ಹೆಚ್ಚು ತೆರಿಗೆಗಳನ್ನು ಹಾಕಿರುವರು. ಕೆಲವರು ಈಗಿನ ಸರ್ಕಾರವನ್ನೆ ಅಂಗೀಕರಿಸುವದಿಲ್ಲ. ಈ ಅಭಿಪ್ರಾಯವು ಕಾಲಕ್ರಮೇಣ ಬದಲಾಗಬಹುದು. ಮಹಾ ಯುದ್ಧಕ್ಕೆ ಮೊದಲು ರಷ್ಯವು ಒಂದು ಮುಖ್ಯಪ್ರಭುತ್ವ (Power) ವಾಗಿತ್ತು. ಈಗಿನ ಸ್ಥಿತಿಯು ಸ್ತಿಮಿತಕ್ಕೆ ಬಂದು ದೇಶದಲ್ಲಿ ದೊರಕುವ ಸಸ್ಯ, ಖನಿಜ ಮತ್ತು ಪ್ರಾಣಿವರ್ಗಗಳ ಸಂಪತ್ತನ್ನು ಸರಿಯಾಗಿ ಉಪಯೋಗಿಸಿಕೊಂಡರೆ ಪುನಃ ಅದು ಮೊದಲಿನ ಉಚ್ಚಸ್ಥಾನಕ್ಕೆ ಬರಲು ಸಂದೇಹವಿಲ್ಲ.

ಸೋವಿಯೆಟ್ ರಷ್ಯಕ್ಕೆ ಸೇರಿರುವ ಯೂಕ್ರೇನಿನಲ್ಲಿ ಫಲವತ್ತಾದ ಕಪ್ಪುಮಣ್ಣಿನ ಪ್ರದೇಶವಿದೆ. ಇಲ್ಲಿ ಭೂಮಿಯು ಮೈದಾನವಾಗಿರುವುದರಿಂದ ಸಂಯುಕ್ತ ಸಂಸ್ಥಾನಗಳಲ್ಲಿ ಉಪಯೋಗಿಸುವಂತಹ ವ್ಯವಸಾಯದ ಮುಟ್ಟುಗಳನ್ನೂ (Implements) ಯಂತ್ರಗಳನ್ನೂ ರಷ್ಯದ ಕಾರ್ಖಾನೆಗಳಲ್ಲಿ ತಯಾರಿಸಿ, ಸಾವಿರಾರು ಎಕರೆ ಜಮೀನುಗಳಲ್ಲಿ ಗೋಧಿಯನ್ನು ಬೆಳೆಯುತ್ತಾರೆ.

ಕೆಲವು ವರ್ಷಗಳಿಂದೀಚೆಗೆ ದೇಶದಲ್ಲಿ ದೊರೆಯುವ ಖನಿಜಗಳನ್ನು ಹೆಚ್ಚಾಗಿ ತೆಗದು ಉಪಯೋಗಿಸುತ್ತಿದಾರೆ. ವ್ಯವಸಾಯಕ್ಕೆ ಅನುಕೂಲವಾದ ಮುಖ್ಯ ಪ್ರದೇಶದಲ್ಲಿಯೂ ಖನಿಜಗಳು ಸಿಕ್ಕುತ್ತವೆ. ಅವುಗಳಲ್ಲಿ ಮುಖ್ಯವಾದುದು ಕಲ್ಲಿದ್ದಲು. ಇದು ಯೂಕ್ರೇನಿನ ನೈರುತ್ಯದಲ್ಲಿರುವ ಡಾನೆಟ್ಸ್ ಗಣಿಯಲ್ಲಿಯೂ, ಟ್ಯೂಲ ಪಟ್ಟಣದ ಹತ್ತಿರದಲ್ಲಿಯೂ ದೊರಕುತ್ತದೆ. ಸಮೀಪದಲ್ಲಿ ಕಬ್ಬಿಣವೂ, ಪ್ರಪಂಚದಲ್ಲಿ ಉತ್ಪತ್ತಿಯಾಗುವ

ಅರ್ಧ ಭಾಗದಷ್ಟು ಮ್ಯಾಂಗನೀಸೂ ಸಿಕ್ಕುತ್ತವೆ. ಯೂರಲ್ ಬೆಟ್ಟಗಳಲ್ಲಿ ಪ್ಲಾಟಿನಂ, ಚಿನ್ನ, ಬೆಳ್ಳಿ, ತಾಮ್ರ, ಸತು, ಸೀಸ, ಇವು ದೊರೆಯುವುವು.

ದೇಶದ ಕೈಗಾರಿಕೆಗಳು ಮಾಸ್ಕೋ ಮತ್ತು ಟ್ಯೂಲಗಳ ನಡುವೆ ಇರುವ ಪ್ರದೇಶದಲ್ಲಿ ನೆಲಸಿವೆ. ಇಲ್ಲಿಯೇ ಖನಿಜಗಳ ಗಣಿಗಳಿವೆ.

**ಮಾಸ್ಕೊ**.—ಸೋವಿಯೆಟ್ ರಷ್ಯದ ರಾಜಧಾನಿಯಾದ ಈ ಪಟ್ಟಣ ದಲ್ಲಿ 20 ಲಕ್ಷ ಜನರಿರುವರು. ಇಲ್ಲಿ ರೈಲು ಮಾರ್ಗಗಳು ಸಂಧಿಸು ವುವು. ಹತ್ತಿಯ ಮತ್ತು ಉಣ್ಣೆಯ ಬಟ್ಟೆಗಳೂ, ಲೋಹದ ಸಾಮಾನು ಗಳೂ ಮಾಸ್ಕೊವಿನಲ್ಲಿ ತಯಾರಾಗುವುವು.

**ಲೆಲಿನ್‌ಗ್ರಾಡ್**.—(ಹಿಂದಿನ ಸೆಂಟ್ ಪೀಟರ್ಸ್‌ಬರ್ಗ್) ಇದು ಬಾಲ್ಟಿಕ್ ಸಮುದ್ರತೀರದಲ್ಲಿರುವ ರೇವುಪಟ್ಟಣ. ಮಧ್ಯರಷ್ಯದಲ್ಲಿ ಬೆಳೆ ಯುವ ಧಾನ್ಯ ಮತ್ತು ಕಾಡಿನ ಉತ್ಪನ್ನಗಳು ಇಲ್ಲಿಂದ ರಫ್ತಾಗುತ್ತವೆ.

## ಬಾಲ್ಕನ್ ಪರ್ಯಾಯದ್ವೀಪ

ಇದು ಯೂರೋಪಿನ ಆಗ್ನೇಯದಲ್ಲಿರುವ ಪರ್ವತಮಯವಾದ ಪರ್ಯಾಯದ್ವೀಪ. ಪಶ್ಚಿಮದಿಂದ ಪೂರ್ವಕ್ಕೆ ಹಬ್ಬಿರುವ ಬಾಲ್ಕನ್ ಪರ್ವ ತಗಳು ಇದರಲ್ಲಿರುವುದರಿಂದ ಇದಕ್ಕೆ ಬಾಲ್ಕನ್ ಪರ್ಯಾಯದ್ವೀಪವೆಂದು ಹೆಸರು ಬಂದಿದೆ. ಇಲ್ಲಿಯ ಜನರು ಯೂರೋಪಿನ ಪಶ್ಚಿಮದೇಶದ ಜನ ರಂತೆ ಅಭಿವೃದ್ಧಿಗೆ ಬಂದಿಲ್ಲ.

ಬಾಲ್ಕನ್ ಪರ್ಯಾಯದ್ವೀಪವು ಯೂರೋಪ್ ಮತ್ತು ಏಷ್ಯಾ ಖಂಡ ಗಳು ಸೇರುವ ಸ್ಥಳದಲ್ಲಿರುವುದರಿಂದ ಇಲ್ಲಿನ ಜನರು ಬೇರೆಬೇರೆ ಜನಾಂಗ ಗಳಿಗೆ ಸೇರಿದವರಾಗಿದಾರೆ. ಇವರ ಮತಗಳೂ, ಭಾಷೆಗಳೂ, ಬೇರೆ ಬೇರೆಯಾಗಿವೆ.

ಈ ಪರ್ಯಾಯದ್ವೀಪದ ಉತ್ತರ ಭಾಗದಲ್ಲಿ ಶೀತೋಷ್ಣಗಳ ವ್ಯತ್ಯಾ ಸವು ಹೆಚ್ಚಾಗಿದೆ. ದಕ್ಷಿಣಭಾಗದಲ್ಲಿ "ಮೆಡಿಟರೇನಿಯನ್" ವಾಯು ಗುಣವಿದ್ದರೂ ಸ್ವಾಭಾವಿಕಲಕ್ಷಣಗಳಿಂದ ಶೀತೋಷ್ಣಗಳಲ್ಲಿ ಹೆಚ್ಚು ವ್ಯತ್ಯಾ ಸಗಳು ಕಂಡುಬರುವುವು. ಪರ್ವತ ಪ್ರದೇಶಗಳಲ್ಲಿ ಕುರಿ, ಮೇಕೆ, ಹಂದಿ ಗಳನ್ನು ಸಾಕುವರು. ನದಿಯ ತೀರಗಳಲ್ಲಿಯೂ, ಕಣಿವೆಗಳಲ್ಲಿಯೂ (Valleys) ಸಮುದ್ರ ತೀರಪ್ರದೇಶಗಳಲ್ಲಿಯೂ "ಮೆಡಿಟರೇನಿಯನ್" ಪ್ರದೇಶದಲ್ಲಾಗುವ ಬೆಳೆಗಳಾಗುವುವು.

ಮೊರಾವ, ಮರಿಟ್ಜ, ವರ್ಡರ್ ನದಿಗಳು ಇಲ್ಲಿ ಹರಿಯುತ್ತವೆ. ಇವುಗಳ ಕಣಿವೆಗಳನ್ನನುಸರಿಸಿ ರೈಲು ಮಾರ್ಗಗಳನ್ನು ಹಾಕಿರುತ್ತಾರೆ.

ಬಾಲ್ಕನ್ ಪರ್ಯಾಯ ದ್ವೀಪದಲ್ಲಿರುವ ರಾಜ್ಯಗಳಾವುವೆಂದರೆ :— ಯುಗೋಸ್ಲಾವಿಯ, ಆಲ್ಬೇನಿಯ, ಗ್ರೀಸ್, ಯುರೋಪಿನ ಟರ್ಕಿ ಮತ್ತು ಬಲ್ಗೇರಿಯ. ಇವುಗಳೊಡನೆ ರೊಮೇನಿಯವನ್ನು ಸೇರಿಸಬಹುದು.

**ಯುಗೋಸ್ಲಾವಿಯ**.—ಬಾಲ್ಕನ್ ಪರ್ಯಾಯ ದ್ವೀಪದಲ್ಲಿ ಇದೇ ದೊಡ್ಡದೇಶ ; ಇದರ ಜನಸಂಖ್ಯೆ 1 ಕೋಟಿ 20 ಲಕ್ಷ. **ಬೆಲ್ಗ್ರೇಡ್** ರಾಜಧಾನಿ ; ಸೇವ್ ನದಿಯು ಡಾನ್ಯೂಬ್ ನದಿಯೊಡನೆ ಸಂಗಮವಾಗುವ ಸ್ಥಳದಲ್ಲಿದೆ. ಜೋಳ, ತೊಲೆ, ಗೋಧಿ, ಪ್ರಾಣಿಗಳು (ದನ, ಹಂದಿ, ಕುದುರೆ) ಹಣ್ಣು ಇವು ರಫ್ತಾಗುವುವು.

**ಆಲ್ಬೇನಿಯ**.—ಇದು ಏಡ್ರಿಯಾಟಿಕ್ ಸಮುದ್ರ ತೀರದ ದಕ್ಷಿಣ ಭಾಗದಲ್ಲಿ, ಗ್ರೀಸ್ ಮತ್ತು ಯುಗೋಸ್ಲಾವಿಯ ದೇಶಗಳ ನಡುವೆ ಇರುವ ಸಣ್ಣರಾಜ್ಯ. ಕಾಡುಗಳು ಇಲ್ಲಿ ಹೆಚ್ಚಾಗಿವೆ. ಜನಸಂಖ್ಯೆ $8\frac{1}{2}$ ಲಕ್ಷ ; ಇದರಲ್ಲಿ $\frac{2}{3}$ ಭಾಗ ಜನರು ಮಹಮ್ಮದೀಯರು. **ಟಿರಾನ** ಎಂಬ ಚಿಕ್ಕ ಊರು ರಾಜಧಾನಿ. **ಸ್ಕೂಟರಿ** ದೊಡ್ಡ ಪಟ್ಟಣ. ಅನ್ಯದೇಶಗಳೊಡನೆ ಆಗುವ ವ್ಯಾಪಾರವು ಅತ್ಯಲ್ಪ.

**ಗ್ರೀಸ್**.—ಬಾಲ್ಕನ್ ದೇಶಗಳ ಪೈಕಿ ಗ್ರೀಸ್ ಹಿಂದಿನಕಾಲದಲ್ಲಿ ಬಹಳ ಪ್ರಖ್ಯಾತಿಯನ್ನು ಹೊಂದಿತ್ತು. ಪ್ರಜಾಪ್ರಭುತ್ವವು ಇಲ್ಲಿ ಮೊದಲು ಸ್ಥಾಪಿತವಾಯಿತು. ವಿಜ್ಞಾನ, ಸಾಹಿತ್ಯ, ಸಂಗೀತ, ತತ್ವಶಾಸ್ತ್ರ, ಶಿಲ್ಪಶಾಸ್ತ್ರ ಇವೆಲ್ಲಾ ಹೆಚ್ಚು ಪ್ರಾಶಸ್ತ್ಯಕ್ಕೆ ಬಂದುವು.

ಈಗಿನ ಗ್ರೀಸ್ ಬ್ರಿಟಿಷ್ ದ್ವೀಪಗಳ ಅರ್ಧಭಾಗಕ್ಕಿಂತ ಕಡಿಮೆಯಾಗಿದೆ. ಇದರ ಜನಸಂಖ್ಯೆ 62 ಲಕ್ಷ. ಪರ್ವತಮಯವಾಗಿರುವುದರಿಂದಲೂ, ಅನೇಕ ದ್ವೀಪಗಳನ್ನೊಳಕೊಂಡಿರುವುದರಿಂದಲೂ ಜನರಲ್ಲಿ ಐಕಮತ್ಯವಿಲ್ಲ. $\frac{1}{3}$ ಜನರು ಹಡಗು ನಡೆಯಿಸುತ್ತಾರೆ, ವ್ಯಾಪಾರ ಮಾಡುತ್ತಾರೆ ಇಲ್ಲವೆ ಮೀನು ಹಿಡಿಯುವರು ; ಮಿಕ್ಕವರು ಕೃಷಿಯಿಂದ ಜೀವಿಸುತ್ತಾರೆ.

**ಅಥೆನ್ಸ್**.—ಈ ದೇಶದ ರಾಜಧಾನಿ ಮತ್ತು ರೇವು ಪಟ್ಟಣ. ರೋಮ್ ಪಟ್ಟಣದಲ್ಲಿರುವಂತೆ ಚರಿತ್ರೆಯಲ್ಲಿ ಪ್ರಸಿದ್ಧವಾಗಿದ್ದು, ಈಗ ಜೀರ್ಣವಾಗಿರುವ ಕಟ್ಟಡಗಳು ಇದರ ಸಮೀಪದಲ್ಲಿವೆ. ಇವುಗಳನ್ನು

ನೋಡಲು ಹೊರಗಿನಿಂದ ಬಹಳ ಜನರು ಬರುತ್ತಾರೆ. ಈಚೆಗೆ ಕಟ್ಟಡಗಳ ಜೀರ್ಣೋದ್ಧಾರವು ಸ್ವಲ್ಪಮಟ್ಟಿಗೆ ನಡೆದಿದೆ. ಇಂಗ್ಲೀಷರು ಮತ್ತು ಅಮೆರಿಕಾ ದೇಶದವರು ಇದಕ್ಕೆ ಹಣದ ಸಹಾಯ ಮಾಡಿರುವರು.

1912 ಮತ್ತು 1914–18ರಲ್ಲಿ ಆದ ಯುದ್ಧಗಳ ಫಲಿತಾಂಶ ದಿಂದ ಗ್ರೀಸ್ ದೇಶದ ವಿಸ್ತೀರ್ಣವು ಹೆಚ್ಚಾಯಿತು.

**ಯೂರೋಪಿನ ಟರ್ಕಿ.**—1453ರಲ್ಲಿ ಏಷ್ಯದ ನೈರುತ್ಯ ದೇಶಗ ಳಲ್ಲಿ ವಾಸಮಾಡುತ್ತಿದ್ದ ತುರುಕರು ದಂಡೆತ್ತಿ ಬಂದು ಕಾನ್‌ಸ್ಟಾಂಟಿನೋ ಪಲ್ ಎಂಬ ಪಟ್ಟಣವನ್ನು ಮುತ್ತಿ ಅದನ್ನು ಸ್ವಾಧೀನಪಡಿಸಿಕೊಂಡರು. ಕ್ರಮೇಣ ಬಾಲ್ಕನ್ ಪರ್ಯಾಯ ದ್ವೀಪದ ಜನರನ್ನೆಲ್ಲ ಗೆದ್ದರು. ಇದ ರಂತೆಯೇ ಆಫ್ರಿಕಾ ಖಂಡದ ಉತ್ತರ ಭಾಗದಲ್ಲಿರುವ ದೇಶಗಳೂ ಅವರ ವಶವಾದುವು. ಆದರೆ ಜಯಿಸಿದ ರಾಜ್ಯಗಳು ಒಂದೊಂದಾಗಿ ಕೈತಪ್ಪಿ ಸ್ವಲ್ಪ ಪ್ರದೇಶ ಮಾತ್ರ ಉಳಿದಿದೆ. ಯೂರೋಪಿನ ಬಾಲ್ಕನ್ ಪರ್ಯಾಯ ದ್ವೀಪದಲ್ಲಿ ಈಗಿರುವ ಟರ್ಕಿಯ ರಾಜ್ಯವು 9,000 ಚ. ಮೈ. ವಿಸ್ತೀರ್ಣವು ಳ್ಳದ್ದಾಗಿದೆ. ಇದರ ಜನಸಂಖ್ಯೆ 12 ಲಕ್ಷ. ಟರ್ಕಿಯ ಮುಖ್ಯವಾದ ಭಾಗವು ಏಷ್ಯಾದಲ್ಲಿದೆ ; ಅದರ ರಾಜಧಾನಿ **ಅಂಗೋರ.**

**ಇಸ್ತಾಂಬುಲ್.**—(ಹಿಂದಿನ ಕಾನ್‌ಸ್ಟಾಂಟಿನೋಪಲ್) ಮೊದಲಿ ನಿಂದಲೂ ಯೂರೋಪಿನ ಒಂದು ಮುಖ್ಯ ಪಟ್ಟಣವಾಗಿದೆ. ಇದರ ಸನ್ನಿ ವೇಶವು ವ್ಯಾಪಾರಕ್ಕೂ, ಶತ್ರುಗಳನ್ನು ಇದಿರಿಸುವುದಕ್ಕೂ ಬಹಳ ಸಹಾಯ ವಾಗಿದೆ.

**ಏಡ್ರಿಯಾನೋಪಲ್.**—ಇದು ವ್ಯಾಪಾರ ಸ್ಥಳವಾಗಿದೆ.

## ಬಲ್ಗೇರಿಯ

ಮಹಾ ಯುದ್ಧವಾದ ಬಳಿಕ ಬಲ್ಗೇರಿಯದ ಸ್ವಲ್ಪ ಭಾಗವು ಗ್ರೀಸಿಗೂ, ಯೂಗೋಸ್ಲಾವಿಯಾಕ್ಕೂ ಸೇರಿಹೋಯಿತು. ಈ ದೇಶವು ಗ್ರೀಸಿಗೂ ರೊಮೇನಿಯಕ್ಕೂ ಮಧ್ಯೆ ಇದೆ. ವಿಸ್ತೀರ್ಣದಲ್ಲಿ ಮೈಸೂರಿನ $1\frac{1}{3}$ರಷ್ಟಿದೆ ; ಜನಸಂಖ್ಯೆ 55 ಲಕ್ಷ. $\frac{4}{5}$ ಭಾಗ ಜನರು ಕೃಷಿಯಿಂದ ಜೀವಿಸುತ್ತಾರೆ. ಗೋಧಿ, ಜೋಳ ಇವು ಮುಖ್ಯವಾದ ಬೆಳೆಗಳು. ಗುಲಾಬಿ ಹೂಗಳನ್ನು

ಬೆಳೆದು ಅವುಗಳಿಂದ ಅತ್ತರನ್ನು ತಯಾರು ಮಾಡಿ ಇತರ ದೇಶಗಳಿಗೆ ಕಳುಹಿಸುವರು.

ದೇಶವು ಬಹುಮಟ್ಟಿಗೆ ಪರ್ವತಮಯವಾಗಿರುವುದರಿಂದ ಕುರಿ, ಮೇಕೆ ಮತ್ತು ದನಗಳನ್ನು ಹೆಚ್ಚಾಗಿ ಸಾಕುತ್ತಾರೆ.

**ಸೊಫಿಯ.**—ಎಂಬುದು ಮುಖ್ಯಪಟ್ಟಣ. ಇದು ಪ್ಯಾರಿಸ್ ಪಟ್ಟಣದಿಂದ ವಿಯನ್ನ, ಬೆಲ್ಗ್ರೇಡ್, ಕಾನ್‌ಸ್ಟಾಂಟಿನೋಪಲ್ಲಿಗೆ ಹೋಗುವ "ಓರಿಯೆಂಟ್ ಎಕ್ಸ್‌ಪ್ರೆಸ್" ರೈಲಿನ ಮಾರ್ಗದಲ್ಲಿದೆ.

## ರೊಮೇನಿಯ

ರೊಮೇನಿಯ ದೇಶವು ಬ್ರಿಟಿಷ್ ದ್ವೀಪಗಳಷ್ಟೇ ವಿಸ್ತೀರ್ಣವುಳ್ಳದ್ದಾಗಿದೆ. ಅದರ ಜನಸಂಖ್ಯೆಯು 1 ಕೋಟಿ 70 ಲಕ್ಷ. ಮಹಾ ಯುದ್ಧದಲ್ಲಿ ಮಿತ್ರವರ್ಗದವರೊಡನೆ ಸೇರಿದುದರಿಂದ ರೊಮೇನಿಯದ ವಿಸ್ತೀರ್ಣವೂ ಜನಸಂಖ್ಯೆಯೂ ಇಮ್ಮಡಿಸಿದುವು. $\frac{4}{5}$ ಜನರಿಗೆ ಕೃಷಿಯೇ ಮುಖ್ಯೋದ್ಯೋಗ. ಕಾಡುಗಳಲ್ಲಿ ಬೀಚ್ ಮತ್ತು ಓಕ್ ಗಿಡಗಳು ಬೆಳೆಯುವುವು. ಕಾರ್ಪೇಥಿಯನ್ ಪರ್ವತಗಳ ಬುಡದಲ್ಲಿ ಕೆರೋಸಿನ್ ಎಣ್ಣೆಯು ಸಿಕ್ಕುವುದು. ಇತರ ಖನಿಜಗಳೂ ಸಿಕ್ಕುವುದರಿಂದ ಕೆಲವು ಕಡೆಗಳಲ್ಲಿ ಕೈಗಾರಿಕೆಗಳು ಪ್ರಾರಂಭವಾಗಿವೆ.

**ಬುಕರೆಸ್ಟ್.**—ಇದು ದೇಶದ ರಾಜಧಾನಿ.

**ಕಾನ್‌ಸ್ಟಂಟ.**—ಕಪ್ಪು ಸಮುದ್ರದ ತೀರದಲ್ಲಿರುವ ರೇವು ಪಟ್ಟಣ : ಇದರ ಮೂಲಕವೇ ಹೆಚ್ಚು ವ್ಯಾಪಾರ ನಡೆಯುತ್ತದೆ.

ಮಹಾ ಯುದ್ಧವಾದಮೇಲೆ ಕೆಲವು ಊರುಗಳ ಹೆಸರುಗಳು ಬದಲಾಗಿವೆ. ಕೆಲವು ಉದಾಹರಣೆಗಳು ಹಿಂದಿನ ಪುಟಗಳಲ್ಲೇ ಸಿಕ್ಕುವುವು. ನಾರ್ವೇ ದೇಶದ ಹಿಂದಿನ ರಾಜಧಾನಿಯಾದ ಕ್ರಿಶ್ಚಿಯಾನಕ್ಕೆ ಒಸ್ಲೊ ಎಂಬ ಹೆಸರನ್ನು ಕೊಟ್ಟಿದಾರೆ.

ವಾಯುಮಾರ್ಗಗಳು.—ಯೂರೋಪ್ ಖಂಡದ ಸಾಮಾನ್ಯ ವಿವರಣೆಯಲ್ಲಿ ಭೂ ಮಾರ್ಗಗಳನ್ನೂ ಜಲ ಮಾರ್ಗಗಳನ್ನೂ ವರ್ಣಿಸಿದೆ (256–7 ನೇ ಪುಟಗಳನ್ನು ನೋಡಿ). ಕೆಲವು ವರ್ಷಗಳಿಂದೀಚೆಗೆ ವಾಯುಮಾರ್ಗಗಳು ಯೂರೋಪ್, ಅಮೆರಿಕ, ಆಫ್ರಿಕ ಮತ್ತು ಏಷ್ಯಾ ಖಂಡಗಳಲ್ಲಿ

ಬಹಳ ಮುಂದುವರಿಯುತ್ತಿವೆ. ವಿಮಾನಗಳು ಪ್ರಯಾಣಿಕರನ್ನೂ, ಟಪ್ಪಾಲನ್ನೂ ಮತ್ತು ಹೆಚ್ಚು ಭಾರವಿಲ್ಲದ ಸಾಮಾನುಗಳನ್ನೂ ಒಯ್ಯುತ್ತವೆ. ರೈಲುಬಂಡಿಗಳು ಕ್ಲುಪ್ತಕಾಲಕ್ಕೆ ಸರಿಯಾಗಿ ಹೊರಡುವಂತೆ ವಿಮಾನಗಳೂ ಹೊರಡುವುವು. ಈಗ ಯೂರೋಪಿನ ಅನೇಕ ಮುಖ್ಯ ಪಟ್ಟಣಗಳಿಗೆ ಅಲ್ಪಕಾಲದಲ್ಲಿ ಹೋಗಿಬರಬಹುದು.

ಇಂಗ್ಲೆಂಡಿನಿಂದ ಕರಾಚಿಗೆ ಒಂದು ವಾರದೊಳಗಾಗಿ ಬರಬಹುದು. ಅಲ್ಲಿಂದ ಡೆಲ್ಲಿ, ಬೊಂಬಾಯಿ, ಮದರಾಸು ಅಥವಾ ಕಲ್ಕತ್ತಾಕ್ಕೂ ಹೋಗಬಹುದು. ಸ್ವಲ್ಪಕಾಲದಲ್ಲಿ ಸಿಂಹಳ ದ್ವೀಪದಲ್ಲಿರುವ **ಕೊಲಂಬೋ**ವಿಗೂ, ಸ್ಟ್ರೇಟ್ ಸೆಟಲ್ಮೆಂಟುಗಳ ಮುಖ್ಯ ಪಟ್ಟಣವಾದ **ಸಿಂಗಪೂರ**ಕ್ಕೂ ವಿಮಾನಗಳ ಪ್ರಯಾಣವು ಏರ್ಪಾಡಾಗುವುದು.

ವಿಮಾನಗಳ ಸಂಚಾರವು ರೂಢಿಗೆ ಬಂದಹಾಗೆಲ್ಲಾ ರೈಲುಗಾಡಿಗಳಲ್ಲಿ ಜನರು ಪ್ರಯಾಣ ಮಾಡುವುದು ಸ್ವಲ್ಪಮಟ್ಟಿಗೆ ಕಮ್ಮಿಯಾಗುವುದು. ಈಚೆಗೆ ಮೋಟಾರು ಬಸ್ಸುಗಳು ರೈಲ್ವೆಗಳ ಆದಾಯಕ್ಕೆ ಕುಂದಕವನ್ನುಂಟು ಮಾಡಿವೆ.

ತಮಗುಂಟಾಗುವ ನಷ್ಟವನ್ನು ಕಡಿಮೆಮಾಡಲು ರೈಲ್ವೆ ಕಂಪೆನಿಗಳು ತಕ್ಕ ಏರ್ಪಾಡುಗಳನ್ನು ಮಾಡುತ್ತಿರುವರು. ಒಂದು ಇಂಗ್ಲೀಷ್ ರೈಲ್ವೆ ಕಂಪೆನಿಯು ಗಂಟೆಗೆ 90 ಮೈಲಿಗಳು ವೇಗವಾಗಿ ಓಡುವ ಎಂಜನನ್ನು ತಯಾರಿಸಿರುವದು. ವಿಮಾನಗಳು 100-150 ಮೈಲಿ ವೇಗವಾಗಿ ಹೋಗುವುವು.

ಭೂವಿವರಣೆಯ ಎರಡನೆಯ ಪುಸ್ತಕದ ಹೊಸ ಮುದ್ರಣದಲ್ಲಿ ಎಲ್ಲಾ ಖಂಡಗಳ ವಾಯುಮಾರ್ಗಗಳ ಪಟಗಳು ಅಚ್ಚಾಗುವುವು.

———————

# ಅಧ್ಯಾಯ ೨

## ಏಷ್ಯಾಖಂಡ

ಯುದ್ಧದಲ್ಲಿ ಸೋತವರಿಗೆ ರಾಜ್ಯ ನಷ್ಟವಾಗುವುದು ವಾಡಿಕೆಯಾಗಿದೆಯಷ್ಟೆ. ಮೊದಲನೆಯ ಅಧ್ಯಾಯದಲ್ಲಿ ಮಹಾ ಯುದ್ಧವು ಕೊನೆಗೊಂಡಾಗ ಜರ್ಮನಿ, ಆಸ್ಟ್ರಿಯ ಹಂಗೆರಿ, ಟರ್ಕಿ ಮತ್ತು ಬಲ್ಗೇರಿಯಾ ದೇಶಗಳಿಗೆ ಆದ ನಷ್ಟಗಳನ್ನು ಸೂಚಿಸಿದೆ. ಈ ಯುದ್ಧವು ಏಷ್ಯಾಖಂಡದಲ್ಲಿಯೂ ಬದಲಾವಣೆಗಳನ್ನುಂಟುಮಾಡಿತು.

ಮಹಾ ಯುದ್ಧದಿಂದ ಯೂರೋಪ್ ಖಂಡದ ಬಹು ಭಾಗಗಳಲ್ಲಿ ಅನೇಕ ಬದಲಾವಣೆಗಳಾದುವು. ಆದರೆ ಏಷ್ಯದಲ್ಲಿ ಅಷ್ಟು ಬದಲಾವಣೆಗಳಾಗಲಿಲ್ಲ. ಆದ ಬದಲಾವಣೆಗಳು ಚೆನ್ನಾಗಿ ನೆನಪಿನಲ್ಲಿರಬೇಕಾದುವು.

ಚೀಣಾದಲ್ಲಿ ರಾಜ್ಯಭಾರಕ್ರಮವು ಬದಲಾಯಿಸಿತು. ಈಚೆಗೆ ಸಯಾಂನಲ್ಲಿಯೂ ಚಳವಳಿ ನಡೆದಿದೆ. ಇವೆಲ್ಲವನ್ನೂ ನಾವು ಸ್ವಲ್ಪಮಟ್ಟಿಗೆ ವಿಚಾರಮಾಡಬೇಕು.

ಏಷ್ಯಾದ ನೈರುತ್ಯ ಭಾಗದಲ್ಲಿರುವ ಪ್ರದೇಶಗಳ ಪಟವನ್ನು ನೋಡಿ. ಇದಕ್ಕೆ ಪಂಚಸಮುದ್ರಗಳ ಪ್ರದೇಶವೆಂಬ ಹೆಸರು ರೂಢಿಯಲ್ಲಿದೆ. ಪರ್ಷಿಯ ದೇಶ ವಿನಾ ಮಿಕ್ಕ ಭಾಗವೆಲ್ಲ ಹಿಂದೆ ಟರ್ಕಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ಈಗಲಾದರೋ ಆ ಪ್ರದೇಶದಲ್ಲಿ ಬೇರೆ ಬೇರೆ ರಾಜಕೀಯ ವಿಭಾಗಗಳೇರ್ಪಟ್ಟಿವೆ. ಅವುಗಳಾವುವೆಂದರೆ :—

1. ಏಷ್ಯದ ಟರ್ಕಿ,
2. ಸಿರಿಯ,
3. ಪಾಲಿಸ್ಟೈನ್,
4. ಟ್ರಾನ್ಸ್‌ಜಾರ್ಡನಿಯ,
5. (ನೆಜ್ಡ್, ಹೆಜಾಜ್, ಓಮಾನ್ ಮತ್ತೂ ಯಮನ್ ಸಂಸ್ಥಾನಗಳನ್ನೊಳಗೊಂಡ) ಅರೇಬಿಯ.

ಈ ರಾಜ್ಯಗಳ ಭೂವಿವರಣೆಯನ್ನು ತಿಳಿಯುವದಕ್ಕೆ ಮೊದಲು ಇನ್ನೊಂದಂಶವನ್ನು ಗಮನಿಸಬೇಕು. ಮಹಾ ಯುದ್ಧವಾದ ಮೇಲೆ ಪ್ರಪಂಚದ ರಾಜಕೀಯ ವಿಚಾರಗಳನ್ನು ಚರ್ಚಿಸಿ, ಎಲ್ಲೆಲ್ಲಿಯೂ ಶಾಂತಿಯು ನೆಲಸುವಂತೆ ಕಾರ್ಯಕ್ರಮಗಳನ್ನು ನಡೆಯಿಸುವದಕ್ಕೆ ಜನಾಂಗಗಳ ಸಂಘ (League of Nations) ವೊಂದೇರ್ಪಟ್ಟಿತು. ಇದರ ಕಛೇರಿಯು ಸ್ವಿಟ್ಸರ್ಲೆಂಡಿನ ಜೆನೀವಾ ಪಟ್ಟಣದಲ್ಲಿದೆ.

ಈ ಸಂಘದ ನಿರೂಪಣ (Mandate) ಕ್ಕನುಸಾರವಾಗಿ ಮೊದಲು ಜರ್ಮನಿಗೆ ಸೇರಿದ್ದ ಸ್ವಾಸ್ಥ್ಯಗಳು (ಕಾಲೊನಿಗಳು) ಇಂಗ್ಲಿಷರ, ಫ್ರೆಂಚರ, ಜಪಾನಿನವರ ಅಥವಾ ಇತರ ದೇಶೀಯರ ಆಡಳಿತದಲ್ಲಿವೆ. ಏಷ್ಯಾಖಂಡದ ನೈರುತ್ಯದಲ್ಲಿರುವ ಸಿರಿಯವು ಫ್ರೆಂಚರ ವಶದಲ್ಲಿಯೂ, ಪಾಲಿಸ್ಟೈನ್ ಮತ್ತು ಟ್ರಾನ್ಸ್ ಜಾರ್ಡನಿಯ ಇವು ಇಂಗ್ಲಿಷರ ವಶದಲ್ಲಿಯೂ ಇವೆ. ಕೆಲವು ಕಾಲ ಇಂಗ್ಲಿಷರ ಆಳಿಕೆಗೊಳಪಟ್ಟಿದ್ದ ಇರಾಕ್ ದೇಶವು ಹೋದ ವರ್ಷ ಸ್ವತಂತ್ರವಾಯಿತು.

ಹೀಗೆ ನಿರೂಪಣಕ್ಕೊಳಗಾದ A ತರಗತಿಯ ದೇಶಗಳಲ್ಲಿ * ರಾಜ್ಯ ಭಾರ ಮಾಡುವವರು ಆಯಾ ದೇಶದ ಜನರಿಗನುಕೂಲಪಡಿಸಬೇಕಲ್ಲದೆ, ತಮ್ಮ ಸ್ವಾರ್ಥಕ್ಕೆ ಯಾವ ಕೆಲಸಗಳನ್ನೂ ಮಾಡಕೂಡದು. ದೇಶದ ಜನರು ಸ್ವತಂತ್ರವಾಗಿ ರಾಜ್ಯಭಾರ ಮಾಡಲು ಶಕ್ತರಾದ ಮೇಲೆ ಅವರ ದೇಶವನ್ನು ಅವರಿಗೆ ಬಿಟ್ಟುಕೊಡಬೇಕು.

ಈ ಪಂಚ ಸಮುದ್ರಗಳ ದೇಶಗಳಲ್ಲಿ ಕಾಡುಗಳಿಂದ ತುಂಬಿದ ಬೆಟ್ಟಗಳೂ, ಫಲವತ್ತಾದ ನದಿಯ ಬೈಲುಗಳೂ, ತಗ್ಗಾಗಿರುವ ತೀರಪ್ರದೇಶಗಳೂ ಇವೆ.

ಇಲ್ಲಿ ಛಳಿಗಾಲದಲ್ಲಿ ಮಳೆಯಾಗುವುದು. ತೀರಪ್ರದೇಶಗಳಲ್ಲಿ ವಿನಾ ಮಿಕ್ಕ ಕಡೆಗಳಲ್ಲಿ ಮಳೆ ಕಡಿಮೆ. ಆದುದರಿಂದ ಏಷ್ಯಾ ಮೈನರಿನ ಪ್ರಸ್ಥ ಭೂಮಿಯು ಹುಲ್ಲುಗಾವಲಿನ ಪ್ರದೇಶವಾಗಿದೆ. ಇಲ್ಲಿ ಪಶುಪಾಲನೆಯೇ ಜನರ ಮುಖ್ಯೋದ್ಯೋಗ. ತೀರಪ್ರದೇಶ ಮತ್ತು 'ಓಯೆಸಿಸ್' ಗಳನ್ನು ಬಿಟ್ಟರೆ ಅರೇಬಿಯವು ಸಹಾರದಂತಹ ಮರುಭೂಮಿಯಾಗಿದೆ. ನೀರಿನ ವಸತಿಯಿರುವೆಡೆಗಳಲ್ಲಿ ಕೃಷಿಯು ನಡೆಯುತ್ತದೆ.

---

* A, B, C ಎಂದು ದೇಶಗಳನ್ನು ಮೂರು ತರಗತಿಗಳಾಗಿ ವಿಭಾಗ ಮಾಡಿರುವರು.

## ಏಷ್ಯದ ಟರ್ಕಿ

ಏಷ್ಯಾ ಖಂಡದಲ್ಲಿ ಟರ್ಕಿಗೆ ಸೇರಿರುವ ಪ್ರದೇಶವು ವಿಸ್ತೀರ್ಣದಲ್ಲಿ ಬ್ರಿಟಿಷ್ ದ್ವೀಪಗಳ ನಾಲ್ಕರಷ್ಟಿದೆ. ಇದರ ಜನಸಂಖ್ಯೆ 1 ಕೋಟಿ 30 ಲಕ್ಷ.

ಮಹಾ ಯುದ್ಧದಲ್ಲಿ ಸೋತುಹೋದ ಕಾರಣ ಟರ್ಕಿಯು ಹೆಚ್ಚು ರಾಜ್ಯವನ್ನು ಕಳೆದುಕೊಂಡಿತು. ಈಗ ಹತ್ತು ವರ್ಷಗಳಿಂದ ಪ್ರಜಾ ಪ್ರಭುತ್ವವೇರ್ಪಟ್ಟು ದೇಶವು ಅಭಿವೃದ್ಧಿಗೆ ಬರುತ್ತಿದೆ. ಪಾಶ್ಚಾತ್ಯ ದೇಶಗಳಲ್ಲಿರುವಂತೆ ಕಾಯಿದೆಗಳು ಮಾಡಲ್ಪಟ್ಟವು. ಉಡುಪಿನಲ್ಲಿಯೂ ಬದಲಾವಣೆಗಳಾಗಬೇಕೆಂದು ಅಲ್ಲಿನ ಮುಖಂಡರಾದ ಕೆಮಾಲ್ ಪಾಷಾರವರು ಪ್ರೋತ್ಸಾಹಿಸುತ್ತಿದಾರೆ.

ಗೋಧಿ, ಹೊಗೆಯಸೊಪ್ಪು, ಹತ್ತಿ ಮತ್ತು ಹಣ್ಣುಗಳು ಬೆಳೆಯುವುವು. 2 ಕೋಟಿಯಷ್ಟು ಕುರಿ ಮತ್ತು ಮೇಕೆಗಳನ್ನು ಸಾಕಿರುವುದರಿಂದ ತುಪ್ಪಟವು ದೊರೆಯುವುದು. ಇದನ್ನು ಜಂಖಾನಗಳಿಗೆ ಉಪಯೋಗಿಸುತ್ತಾರೆ. ಖರ್ಜೂರ, ಅಂಜೂರ, ಜಂಖಾನಗಳು ಇವು ಇಲ್ಲಿಂದ ರಫ್ತಾಗುವುವು.

**ಅಂಗೋರ** —ಇದು ಟರ್ಕಿಯ ರಾಜಧಾನಿ. ಪಶ್ಚಿಮ ತೀರದಲ್ಲಿರುವ **ಸ್ಮರ್ನ** ಎಂಬ ಬಂದರಿನ ಮೂಲಕ ಯೂರೋಪಿನೊಡನೆ ವ್ಯಾಪಾರ ನಡೆಯುವುದು. ಇದು ಜನಸಂಖ್ಯೆಯಲ್ಲಿಯೂ, ಮುಖ್ಯತೆಯಲ್ಲಿಯೂ ಅಂಗೋರಕ್ಕಿಂತ ದೊಡ್ಡದು. ಇಲ್ಲಿಂದ **ಬಾಗ್ದಾದಿಗೆ** ರೈಲು ಮಾರ್ಗವು ಹೋಗುವುದು.

## ಸಿರಿಯ

ಸಿರಿಯವು ವಿಸ್ತೀರ್ಣದಲ್ಲಿ ಮೈಸೂರಿನ ಎರಡರಷ್ಟಿದೆ ; ಜನಸಂಖ್ಯೆ 30 ಲಕ್ಷ. ದೇಶದ ಬಹು ಕಡೆಗಳಲ್ಲಿ ಮಳೆ ಕಡಿಮೆ. ಮೆಡಿಟರೇನಿಯನ್ ತೀರಪ್ರದೇಶದಲ್ಲಿ ಸುಮಾರು 20 ಅಂಗುಲ ಮಳೆಯಾಗುವುದರಿಂದ ಜನರು ದ್ರಾಕ್ಷಿ, ಸೀಮೆ ಹಿಪ್ಪೆ, ಬಾರ್ಲಿ, ಗೋಧಿ, ಹಣ್ಣು ಇವುಗಳನ್ನು ಬೆಳೆಯುವರು. ಕೆಲವೆಡೆಗಳಲ್ಲಿ ಹತ್ತಿಯೂ, ಹೊಗೆಯಸೊಪ್ಪೂ ಆಗುವುವು. ರೇಷ್ಮೆಯ ಹುಳಗಳನ್ನು ಸಾಕಿ ರೇಷ್ಮೆ ನೂಲನ್ನು ರಫ್ತು ಮಾಡುವರು.

ಮಳೆಯಿಲ್ಲದ ಒಳಪ್ರದೇಶದಲ್ಲಿ ಪಶುಪಾಲನೆಯೇ ಮುಖ್ಯೋದ್ಯೋಗ. **ಡಮಾಸ್ಕಸ್** ಮತ್ತು ಅಲೆಪ್ಪೊ ಕ್ಯಾರವಾನ್ ವ್ಯಾಪಾರಕ್ಕೆ ಪ್ರಸಿದ್ಧ ವಾಗಿವೆ. **ಬೇರೂಟ್** ಮುಖ್ಯ ರೇವುಪಟ್ಟಣ. ಇಲ್ಲಿ ಅಮೆರಿಕ ದೇಶಿ ಯರು * ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿರುವರು.

## ಪಾಲಿಸ್ಟೈನ್

ಪಾಲಿಸ್ಟೈನ್ ಯೆಹೂದ್ಯರ (Jews) ಪೂರ್ವದ ನಿವಾಸಸ್ಥಾನ ವಾಗಿತ್ತು. ಇಲ್ಲಿ ಕ್ರೈಸ್ತಮತ ಸ್ಥಾಪಕನಾದ ಯೇಸುಕ್ರಿಸ್ತನು ಹುಟ್ಟಿ, ಬೆಳೆದು, ಮತಪ್ರಚಾರ ಕಾರ್ಯಮಾಡಿ, ಮರಣವನ್ನು ಹೊಂದಿದನು. ಆದುದರಿಂದ ಇದು ' ಪವಿತ್ರ ಭೂಮಿ ' ಎಂದು ಎಣಿಸಲ್ಪಟ್ಟಿದೆ.

ಪಾಲಿಸ್ಟೈನ್ ತುರುಕರ ವಶವಾದ ಮೇಲೆ ಯೆಹೂದ್ಯರು ಬೇರೆ ಬೇರೆ ದೇಶಗಳಿಗೆ ಹೋದರು. ಮಹಾ ಯುದ್ಧವಾದ ಅನಂತರ ಬ್ರಿಟಿಷ್ ಸರ್ಕಾರದವರು ಪ್ರಪಂಚದ ನಾನಾ ದೇಶಗಳಲ್ಲಿರುವ ಯೆಹೂದ್ಯರನ್ನು ಪುನಃ ಪಾಲಿಸ್ಟೈನಿನಲ್ಲಿ ನೆಲಸುವಂತೆ ಕರೆದರು. ಈಚೆಗೆ ಸಾವಿರಾರು ಜನರು ಅಲ್ಲಿಗೆ ಹೋಗಿ ಮನೆಗಳನ್ನು ಮಾಡಿಕೊಂಡು ದೇಶವನ್ನು ಅಭಿವೃದ್ಧಿಗೆ ತರುತ್ತಿದಾರೆ. ಆದರೆ ಈ ಏರ್ಪಾಡು ಜನಸಂಖ್ಯೆಯಲ್ಲಿ ಹೆಚ್ಚಾಗಿರುವ ಅರೇಬಿಯದವರಿಗೆ ಅಸಮಾಧಾನವನ್ನುಂಟುಮಾಡಿದೆ. ಅರೇಬಿಯದವರು ಯೆಹೂದ್ಯರಂತಹ ಧನಿಕರಲ್ಲ. ಕ್ರಮೇಣ ಎರಡು ಜನಾಂಗದವರೂ ಸಮಾ ಧಾನ ಭಾವದಿಂದ ಬೆರೆತು ಮುಂದೆ ದೇಶದ ಏಳಿಗೆಗೆ ಕೆಲಸ ಮಾಡಬಹು ದೆಂಬ ನಿರೀಕ್ಷಣೆಯಿದೆ.

ಪಾಲಿಸ್ಟೈನ್ 9,000 ಚ. ಮೈ. ವಿಸ್ತೀರ್ಣವುಳ್ಳ ಚಿಕ್ಕದೇಶ ; ಜನ ಸಂಖ್ಯೆ 8½ ಲಕ್ಷ. ದೇಶದ ಸ್ವಾಭಾವಿಕ ಲಕ್ಷಣದಲ್ಲಿ ಒಂದು ವಿಷಯವನ್ನು ಗಮನಿಸಬೇಕು. ಇಲ್ಲಿ ಇಕ್ಕಟ್ಟಾದ, ಭೂಮಿಯೊಡೆದು, ಜಾರಿರುವ ಕಣಿವೆ (Rift-valley) ಯೊಂದಿದೆ. ಇದರಲ್ಲಿಯೇ ಮೃತ್ಯುಸರೋವರ, ಜಾರ್ಡನ್ ನದಿ, ಗ್ಯಾಲಿಲಿ ಸಮುದ್ರ ಇವು ಇವೆ. (ಭೂವಿವರಣೆಯ 117ನೆಯ ಪುಟವನ್ನು ನೋಡಿ) ದೇಶದಲ್ಲಿ ಮಳೆ ಕಡಿಮೆ. ಸುಣ್ಣಕಲ್ಲಿನ ಗುಡ್ಡಗಳಲ್ಲಿ

* ಅಮೆರಿಕ ದೇಶವೆಂದರೆ ಉತ್ತರ ಅಮೆರಿಕದ ಸಂಯುಕ್ತ ಸಂಸ್ಥಾನಗಳು.

ಕುರಿಗಳನ್ನು ಮೇಯಿಸುತ್ತಾರೆ. ದ್ರಾಕ್ಷಿಯೂ, ಹಿಪ್ಪಲಿ ನೇರಳೆಯೂ ಫಲವತ್ತಾದ ಇಳಿಜಾರು ಪ್ರದೇಶಗಳಲ್ಲಿ ಬೆಳೆಯುವುವು. ಕೃಷಿಯೇ ಮುಖ್ಯೋದ್ಯೋಗ.

**ಜೆರೂಸಲೆಂ**—ಪಾಲಿಸ್ಟೈನಿಗೆ ಮೂರು ಸಾವಿರ ವರುಷಗಳಿಂದ ಮುಖ್ಯಪಟ್ಟಣವಾಗಿದೆ. ಜಾಫಾ ಮುಖ್ಯ ರೇವುಪಟ್ಟಣ. ಇಲ್ಲಿಂದ ಕಿತ್ತಲೆ ಹಣ್ಣುಗಳು ರಫ್ತಾಗುವುವು. ಇವು ಮದರಾಸಿನಲ್ಲಿಯೂ ಸಿಕ್ಕುವುವು. ಸಾವಿರಾರು ಜನರು ಜೆರೂಸಲೆಂ ಮುಂತಾದ ಸ್ಥಳಗಳನ್ನು ನೋಡಲು ಪ್ರತಿ ವರ್ಷವೂ ಹೋಗುವರು.

## ಟ್ರಾನ್ಸ್ ಜಾರ್ಡನಿಯ

ಟ್ರಾನ್ಸ್ ಜಾರ್ಡನಿಯವು ಒಬ್ಬ ಅಮೀರನ ಆಳ್ವಿಕೆಯಲ್ಲಿದ್ದರೂ ಬ್ರಿಟಿಷ್ ಸರ್ಕಾರದ ಸಲಹೆಗೊಳಪಟ್ಟಿದೆ. ದೇಶದಲ್ಲಿ ಸ್ವಲ್ಪ ಭಾಗ ಮಾತ್ರ ಫಲವತ್ತಾಗಿದೆ.

## ಇರಾಕ್

ಟೈಗ್ರಿಸ್ ಮತ್ತು ಯೂಫ್ರೆಟಿಸ್ ನದಿಗಳ ಸುತ್ತು ಮುತ್ತಿರುವ ಪ್ರದೇಶಕ್ಕೆ **ಮೆಸೊಪೊಟೋಮಿಯ** * ಎಂಬ ಹೆಸರು ಬಂದಿದೆ. ಈಗ ಇದನ್ನು ಇರಾಕ್ ಎಂದು ಕರೆಯುತ್ತಾರೆ. ಈಜಿಪ್ಟಿಗೆ ನೈಲ್ ನದಿಯು ಹೇಗೆ ಮುಖ್ಯವೋ ಹಾಗೆಯೇ ಇಲ್ಲಿ ಹರಿಯುವ ನದಿಗಳು ದೇಶದ ಅಭಿವೃದ್ಧಿಗೆ ಸಹಕಾರಿಗಳಾಗಿವೆ.

ಪೂರ್ವಕಾಲದಲ್ಲಿ ಫಲವತ್ತಾಗಿದ್ದು ಅನಂತರ ಸರಿಯಾದ ರಾಜ್ಯಭಾರವಿಲ್ಲದುದರಿಂದ, ದೇಶವು ಹೀನಸ್ಥಿತಿಗೆ ಬಂದು ಜೌಗು ಪ್ರದೇಶವೂ ಮರಳು ಕಾಡೂ ಹೆಚ್ಚಿದುವು. ಪುನಃ ದೇಶದಲ್ಲಿರುವ ನೀರಿನ ವಸತಿಯನ್ನು ಕ್ರಮಪಡಿಸಿದರೆ ಗೋಧಿ, ಹತ್ತಿ, ಬತ್ತ, ಹೊಗೇಸೊಪ್ಪು, ಹಿಪ್ಪಲಿ ನೇರಳೆ ಇವುಗಳನ್ನು ಬೆಳೆಯಬಹುದು. ಈಗಿನ ಸರ್ಕಾರವು ಸಂಪದಭಿವೃದ್ಧಿಗೆ ಬೇಕಾದ ಏರ್ಪಾಡುಗಳನ್ನು ಮಾಡುತ್ತಿರುವುದು.

---

* ಪಂಜಾಬಿನಲ್ಲಿ 'ದೋಆಬ್' ಎಂಬ ಶಬ್ದವನ್ನುಪಯೋಗಿಸುವರು. ಎರಡು ನದಿಗಳ ಮಧ್ಯೆಯಿರುವ ಪ್ರದೇಶಕ್ಕೆ ದೋಆಬ್ ಎನ್ನುತ್ತಾರೆ.

ಇರಾಕ್ ಬ್ರಿಟಿಷ್ ದ್ವೀಪಗಳಿಗಿಂತ ಸ್ವಲ್ಪ ದೊಡ್ಡದು ; ಜನಸಂಖ್ಯೆ 30 ಲಕ್ಷ.

**ಬಾಗ್ದಾದ್** ದೇಶದ ರಾಜಧಾನಿ ಮತ್ತು ಕ್ಯಾರವಾನ್ ದಾರಿಗಳು ಸೇರುವ ಸ್ಥಳ. **ಬಾಸ್ರಾವು** ನದಿ ಮುಖಜಭೂಮಿಯಲ್ಲಿರುವ ರೇವುಪಟ್ಟಣ. ಇದಕ್ಕೂ ಬಾಗ್ದಾದಿಗೂ ರೈಲು ಮಾರ್ಗವಿದೆ. ಟೈಗ್ರಿಸ್ ನದಿಯ ದಡದಲ್ಲಿರುವ **ಮೊಸೂಲಿನ** ಬಳಿ ಎಣ್ಣೆಯ ಬಾವಿಗಳಿವೆ. ಇವುಗಳಿಂದ ಎಣ್ಣೆಯನ್ನು ತೆಗೆಯುತ್ತಾರೆ.

ಇಂಗ್ಲೆಂಡಿನಿಂದ ಇಂಡಿಯಾಕ್ಕೆ ಸಂಚರಿಸುವ ವಿಮಾನಗಳು ಇರಾಕಿನ ಮಾರ್ಗವಾಗಿಯೇ ಬರುವುವು. ಬಾಗ್ದಾದ್ ವಿಮಾನಗಳು ತಂಗುವ ಸ್ಥಳವಾಗಿದೆ (Air centre).

## ಅರೇಬಿಯ

ಅರೇಬಿಯವು ಎತ್ತರವಾಗಿರುವ ಪ್ರಸ್ಥಭೂಮಿ. ನಿರ್ಜಲ ಪ್ರದೇಶವೇ ಹೆಚ್ಚಾಗಿರುವುದರಿಂದ ಇದು ಮರುಭೂಮಿಯಾಗಿದೆ. ಸಮುದ್ರತೀರ ಪ್ರದೇಶಗಳಲ್ಲಿಯೂ, ಎತ್ತರವಾಗಿರುವ ಸ್ಥಳಗಳಲ್ಲಿಯೂ ಸ್ವಲ್ಪ ಮಳೆ ಬರುವುದು.

ಈ ದೇಶದ ಜನಸಂಖ್ಯೆಯ (60 ಲಕ್ಷ) ½ ಭಾಗದಷ್ಟು ಫಲವತ್ತಾದ ತೀರ ಪ್ರದೇಶಗಳಲ್ಲಿ ವಾಸಮಾಡುತ್ತಾರೆ. ಒಳಭಾಗದಲ್ಲಿನ ಓಯಸಿಸ್‌ಗಳ ಸಮೀಪದಲ್ಲಿ ಖರ್ಜೂರ, ಧಾನ್ಯ ಇವುಗಳನ್ನು ಬೆಳೆಯುವರು.

ಪಶುಪಾಲನೆಯೇ ಮುಖ್ಯಕಸಬು. ಕುದುರೆ, ಹೇಸರಕತ್ತೆ, ಒಂಟೆ ಇವುಗಳನ್ನು ಸಾಕುವರು.

ಏಷ್ಯಾ ಖಂಡದ ನೈರುತ್ಯ ಭಾಗದಲ್ಲಿಯೂ ಯೂರೋಪಿನ ಜನಾಂಗಗಳ ಆಳಿಕೆಗೆ ಅರೇಬಿಯಾ, ಪರ್ಷಿಯ ಮತ್ತು ಆಫ್ಘಾನಿಸ್ಥಾನಗಳು ಒಳಪಟ್ಟಿಲ್ಲ. ಅರೇಬಿಯದಲ್ಲಿನ ಸಂಸ್ಥಾನಗಳು ಸ್ವತಂತ್ರವಾಗಿದ್ದರೂ ನೆಜ್ ದೇಶದ ಸುಲ್ತಾನರನ್ನು ಎಲ್ಲರೂ ಪುರಸ್ಕರಿಸುವರು.

**ಹೆಜಾಜ್**. –ಇದು ಪಶ್ಚಿಮ ತೀರ ಪ್ರದೇಶದಲ್ಲಿದೆ. ಇದರಲ್ಲಿಯೇ ಮಹಮ್ಮದೀಯರಿಗೆ ಯಾತ್ರಾಸ್ಥಳಗಳಾದ **ಮಕ್ಕಾ**, **ಮೆಡಿನಾ** ಎಂಬ ಪಟ್ಟಣಗಳಿವೆ.

**ಯೆಮೆನ್.**—ಇದು ಬಹಳ ಜನಸಾಂದ್ರತೆಯುಳ್ಳ ದೇಶವಾಗಿದೆ. ಇಲ್ಲಿ ಪ್ರಸಿದ್ಧವಾದ ಕಾಫಿ ಬೆಳೆಯುವುದು. ಇದು ಮೋಕ್ಕಾ ರೇವುಪಟ್ಟಣ ದಿಂದ ರಫ್ತಾಗುವುದರಿಂದ ಮೋಕ್ಕಾ ಕಾಫಿಯೆಂಬ ಹೆಸರು ಬಂದಿದೆ.

**ಏಡನ್.**—ಇದು ಬ್ರಿಟಿಷರಿಗೆ ಸೇರಿದೆ. ಅರೇಬಿಯದ ಮುಖ್ಯ ರೇವುಪಟ್ಟಣ. ಇಂಡಿಯಾದಿಂದಲೂ, ಇಂಗ್ಲೆಂಡಿನಿಂದಲೂ ಇಲ್ಲಿಗೆ ಹತ್ತಿಯ ಬಟ್ಟೆಗಳು ಆಮದಾಗುವುವು. ಆಫ್ರಿಕಾ ಖಂಡದ ಸೋಮಾಲಿ ಲ್ಯಾಂಡಿನೊಡನೆ ಈ ರೇವುಪಟ್ಟಣದ ಮೂಲಕ ವ್ಯಾಪಾರ ನಡೆಯುವುದು. ಯೂರೋಪ್ ಖಂಡದ ದೇಶಗಳಿಂದ ಸೂಯಸ್ ಕಾಲುವೆಯ ಮಾರ್ಗವಾಗಿ ಇಂಡಿಯಾ, ಸಿಲೋನ್, ಮಲಯ, ಆಸ್ಟ್ರೇಲಿಯ, ಚೀಣಾ, ಜಪಾನ್ ದೇಶ ಗಳಿಗೆ ಸಂಚರಿಸುವ ಹಡಗುಗಳು ಇಲ್ಲಿ ಕಲ್ಲಿದ್ದಲು ಅಥವಾ ಉರಿಸುವುದಕ್ಕೆ ಬೇಕಾದ ಎಣ್ಣೆ (Oil fuel) ಮತ್ತು ಸಿಹಿನೀರನ್ನು ತುಂಬಿಕೊಳ್ಳುತ್ತವೆ. ಕೆಲವು ಹಡಗುಗಳು ಏಡನ್ನಿನಲ್ಲಿ ತಂಗದೆ ನೇರವಾಗಿ ಸಂಚರಿಸುವುವು.

**ನೆಜ್ದ್.**—ಈ ಸಂಸ್ಥಾನದ ಓಯಿಸಿಸ್‌ಗಳಲ್ಲಿ ಲೋಕಪ್ರಸಿದ್ಧವಾದ ಕುದುರೆಗಳನ್ನು ಸಾಕುವರು. ಇಲ್ಲಿನ ಸುಲ್ತಾನರೇ ಈ ಪರ್ಯಾಯದ್ವೀಪ ದಲ್ಲೆಲ್ಲಾ ಶಕ್ತರಾದ ಅರಸರು. ಇವರ ಅಧಿಕಾರಕ್ಕೆ ಎಲ್ಲರೂ ಸಮ್ಮತಿಸು ವರು. ಆದರೆ ಯೆಮನ್, ಓಮನ್ ರಾಜ್ಯಗಳು ಸ್ವತಂತ್ರವಾಗಿವೆ.

ಓಮನ್ನಿನಲ್ಲಿ ಖರ್ಜೂರದ ವ್ಯಾಪಾರ ನಡೆಯುತ್ತದೆ. **ಮುಸ್ಕತ್** ನಿಂದ ಖರ್ಜೂರವು ರಫ್ತಾಗುವುದು.

**ಚೀಣಾ ಪ್ರಜಾಪ್ರಭುತ್ವ.**—1912ರಲ್ಲಿ ಉಂಟಾದ ಪರಿವರ್ತ ನೆಯಿಂದ ಚಕ್ರಾಧಿಪತ್ಯಕ್ಕೆ ಬದಲಾಗಿ ಪ್ರಜಾಪ್ರಭುತ್ವವು ನೆಲೆಗೊಂಡಿದೆ (217ನೇ ಪುಟವನ್ನು ನೋಡಿ). ದೇಶವು ವಿಸ್ತೀರ್ಣದಲ್ಲಿ ಭೂಮಿಯ $\frac{1}{12}$ ಭಾಗದಷ್ಟಿದೆ ; ಪ್ರಪಂಚದ $\frac{1}{5}$ ಭಾಗ ಜನರು ಇಲ್ಲಿ ವಾಸಮಾಡುವರು.

ವಿಸ್ತಾರದಲ್ಲಿ ಬಹು ದೊಡ್ಡದಾಗಿರುವುದರಿಂದಲೂ, ಮೈದಾನ, ಪರ್ವತ, ಪ್ರಸ್ಥಭೂಮಿ, ಹುಲ್ಲುಗಾವಲು, ಮರುಭೂಮಿ ಇವುಗಳನ್ನೊಳ ಕೊಂಡಿರುವುದರಿಂದಲೂ, ಜನರು ಬೇರೆ ಬೇರೆ ನಾಡು ಭಾಷೆಗಳನ್ನಾಡು ವುದರಿಂದಲೂ ಬೌದ್ಧ, ಮುಸಲ್ಮಾನ ಅಥವಾ ಕ್ರೈಸ್ತ ಮತಾವಲಂಬಿಗ ಳಾಗಿರುವುದರಿಂದಲೂ, ದೇಶದಲ್ಲಿ ಶಾಂತಿಯು ನೆಲಸುವುದಕ್ಕೆ ಸಾಧ್ಯವಿಲ್ಲದೆ ಹೋಗಿದೆ. ಸರ್ಕಾರದ ಆಡಳಿತದಲ್ಲಿ ಬದಲಾವಣೆಗಳಾದಾಗಲೆಲ್ಲಾ

ರಾಷ್ಟ್ರದಲ್ಲಿ ಒಳಯುದ್ಧಗಳಾಗುವುವು. ಹೆಸರಿಗೆ ಮಾತ್ರ ಚೀಣಾಕ್ಕೆ ಮಾಂಚೂರಿಯು, ಮಂಗೋಲಿಯು, ಸಿಂಕಿಯಾಂಗ್, ಟಿಬೆಟ್‌ಗಳೆಂಬ ಭಾಗಗಳು ಸೇರಿವೆ. ಕೋರಿಯು, ಫಾರ್ಮಸಂಗ್ ಪರ್ಯ್ಯಾಯ ದ್ವೀಪಗಳು ಜಪಾನಿಯವರ ವಶದಲ್ಲಿವೆ. ಕೆಲವು ವರ್ಷಗಳಿಂದ ಮಾಂಚೂರಿಯದಲ್ಲಿ ಇವರ ಪ್ರಾಬಲ್ಯವು ಹೆಚ್ಚಿ ಈಚೆಗೆ ಯುದ್ಧ ನಡೆದು 'ಮಂಚುಕೊ' ಎಂಬ ರಾಜ್ಯವು ಸ್ಥಾಪಿತವಾಗಿದೆ. ಇದರಿಂದ ಚೀಣಾದೇಶದಲ್ಲಿ ಹೆಚ್ಚು ಚಳುವಳಿಯೂ ಗಲಭೆಯೂ ಉಂಟಾಗಿವೆ.

1928ರಲ್ಲಿ **ನಾನ್‌ಕಿಂಗ್** ಪಟ್ಟಣವು ರಾಜಧಾನಿಯಾಗಿ ಮಾಡಲ್ಪಟ್ಟಿತ್ತು. ಇದಕ್ಕೆ ಮೊದಲು **ಪೀಕಿಂಗ್** (ಈಗಿನ **ಪೈಪಿಂಗ್**) ರಾಜಧಾನಿಯಾಗಿತ್ತು. ನಾನ್‌ಕಿಂಗ್ ವ್ಯಾಪಾರಕ್ಕೂ ಮುಖ್ಯಸ್ಥಳವಾಗಿದೆ.

ಹಿಂದಿನ ಕಾಲದಲ್ಲಿ ಅನ್ಯದೇಶಗಳೊಡನೆ ವ್ಯಾಪಾರ ಮಾಡುವುದೂ, ದೇಶಾಟನೆ ಮಾಡುವುದೂ ಚೀಣೀಯರಿಗೆ ಬೇಕಿರಲಿಲ್ಲ. ಈಗ ದೇಶದ ಯುವಕರು ಫ್ರಾನ್ಸ್, ಬೆಲ್ಜಿಯಂ, ಇಂಗ್ಲೆಂಡ್ ಮತ್ತು ಸಂಯುಕ್ತ ಸಂಸ್ಥಾನಗಳಿಗೆ ವ್ಯಾಸಂಗಮಾಡಲು ಹೋಗಿ ಬರುವರು. ಅಮೆರಿಕಾ ದೇಶೀಯರು ಇಲ್ಲಿ ಅನೇಕ ವಿದ್ಯಾಶಾಲೆಗಳನ್ನು ಸ್ಥಾಪಿಸಿ, ನಡೆಸುತ್ತಿದ್ದಾರೆ.

## ಜಪಾನ್ ಚಕ್ರಾಧಿಪತ್ಯ

ಜಪಾನ್ ದ್ವೀಪಗಳನ್ನು ಪೆಸಿಫಿಕ್ ಸಾಗರದ ಬ್ರಿಟಿಷ್ ದ್ವೀಪಗಳೆಂದು ಕರೆಯುವುದುಂಟು. ಹೋಲಿಕೆಗಳಿಗಿಂತ ವ್ಯತ್ಯಾಸಗಳೇ ಹೆಚ್ಚು ಕಂಡುಬರುವುವು. ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ದೇಶಗಳು ಸೇರಿವೆ. ಬ್ರಿಟಿಷ್ ದ್ವೀಪಗಳಲ್ಲಿ ಕಬ್ಬಿಣ ಮತ್ತು ಕಲ್ಲಿದ್ದಲು ಹೇರಳವಾಗಿ ದೊರೆಯುವುವು; ಪಶುಪಾಲನೆಗೆ ಬೇಕಾದ ಸೌಕರ್ಯಗಳಿವೆ. ಜಪಾನ್ ಚಕ್ರಾಧಿಪತ್ಯಕ್ಕೆ ಸೇರಿದ ಪ್ರದೇಶಗಳಾದರೋ ಸಮೀಪದಲ್ಲಿಯೇ ಇವೆ. ಖನಿಜಸಂಪತ್ತು ಕಡಿಮೆ; ಪಶುಪಾಲನೆಯಿಲ್ಲವೆಂದೇ ಹೇಳಬಹುದು. ಸನ್ನಿವೇಶ, ತೀರಲಕ್ಷಣ, ನೌಕಾಬಲ, ಇವುಗಳಲ್ಲಿ ಎರಡು ದ್ವೀಪಗಳೂ ಹೋಲುವುವು.

ಜಪಾನ್ ದ್ವೀಪಗಳ ಜನಸಂಖ್ಯೆ ೬½ ಕೋಟಿ. ಇಲ್ಲಿನ ಜನಸಾಂದ್ರತೆ ಬ್ರಿಟಿಷ್ ದ್ವೀಪಗಳಿಗಿಂತ ಹೆಚ್ಚಾಗಿದೆ. ಜನರಿಗೆ ಕೆಲಸವನ್ನೊದಗಿಸಲು

ಗಿರಣಿಗಳನ್ನು ಸ್ಥಾಪಿಸಿರುತ್ತಾರೆ. ಅನ್ಯದೇಶಗಳಿಗೆ ರಫ್ತು ಮಾಡಬಹುದಾದ ಪದಾರ್ಥಗಳನ್ನು ತಯಾರಿಸುವ ಉದ್ಯೋಗಗಳು ಸ್ವಲ್ಪಕಾಲದಲ್ಲಿಯೇ ಅಭಿವೃದ್ಧಿಗೆ ಬಂದವು. ಜಪಾನಿಯವರ ಬಟ್ಟೆಗಳೂ ಇತರ ಸಾಮಾನುಗಳೂ ಅನ್ಯದೇಶಗಳ ಪದಾರ್ಥಗಳೊಡನೆ ಪೋಟಾಪೋಟಿ ಮಾಡುತ್ತಿವೆ. ಇಂಡಿಯಾದಲ್ಲಿ ಜಪಾನಿಯರು ತಮ್ಮ ಬಟ್ಟೆಗಳನ್ನು ಬಹಳ ಕಡಿಮೆ ಬೆಲೆಗೆ ಮಾರಿದುದರಿಂದ, ದೇಶದ ಗಿರಣಿಗಳ ಬಟ್ಟೆಗೆ ಗಿರಾಕಿಯಿಲ್ಲದೆ ಹೋಯಿತು. ಈಗತಾನೆ ಸರ್ಕಾರದವರು ಜಪಾನ್ ಬಟ್ಟೆಗಳ ಮೇಲೆ ಸುಂಕವನ್ನು ಹೆಚ್ಚಿಸಿದರು.

ಕೈಗಾರಿಕೆಗಳಿಗೆ ಬೇಕಾದ ಕೆಲವು ಪದಾರ್ಥಗಳನ್ನು ಹತ್ತಿರಿರುವ ಪ್ರದೇಶಗಳಿಂದ ಪಡೆಯುವುದಕ್ಕೋಸ್ಕರವೇ ಜಪಾನಿಯವರು ಮಂಚೂರಿಯದಲ್ಲಿ ತಮ್ಮ ಪ್ರಾಬಲ್ಯವನ್ನು ಬಲಪಡಿಸಿಕೊಳ್ಳುತ್ತಿರುವರು.

ಯೂರೋಪಿನ ಮಹಾ ಯುದ್ಧವಾದ ಬಳಿಕ ಜಪಾನಿನ ವ್ಯಾಪಾರವು ಬಹಳ ಮುಂದುವರಿಯಿತು. ಪೆಸಿಫಿಕ್ ಸಾಗರದಲ್ಲಿ ಜರ್ಮನಿಗೆ ಸೇರಿದ್ದ ಕೆಲವು ದ್ವೀಪಗಳನ್ನು ಜಪಾನಿಯವರು ನೋಡಿಕೊಂಡಿರುವಂತೆ ಜನಾಂಗ ಸಂಘದವರು ವ್ಯವಸ್ಥೆ ಮಾಡಿದರು.

ಜಪಾನ್ ದ್ವೀಪಗಳು ಸಂಯುಕ್ತ ಸಂಸ್ಥಾನಗಳೊಡನೆಯೂ ಹೆಚ್ಚು ವ್ಯಾಪಾರವನ್ನು ನಡೆಸುವುವು. ಜಪಾನಿಯರ ಬ್ಯಾಂಕುಗಳು ಪ್ರಪಂಚದ ಮುಖ್ಯಪಟ್ಟಣಗಳಲ್ಲಿ ಸ್ಥಾಪಿತವಾಗಿವೆ ; ಅವರ ಹಡಗುಗಳು ಎಲ್ಲಾ ಸಮುದ್ರಗಳಲ್ಲೂ ಸಂಚರಿಸುತ್ತಿವೆ.

## ಸಯಾಂ

ಇಲ್ಲಿ ಸಾಂಕುಶಪ್ರಭುತ್ವವು ನೆಲೆಗೊಂಡಿದೆಯೆಂದು ಹೇಳಿದೆಯಷ್ಟೆ (230ನೆ ಪುಟವನ್ನು ನೋಡಿ). ಇದು ಹೆಸರಿಗೆ ಮಾತ್ರವಲ್ಲದೆ ಕಾರ್ಯತಃ ಹೋದ ವರ್ಷದ ತನಕ ಆಚರಣೆಗೆ ಬರಲಿಲ್ಲ. ಆಗ ನಡೆದ ಕೊಲೆಯಿಲ್ಲದ ಪರಿವರ್ತನೆಯಿಂದ ದೇಶದ ರಾಜನು ತನ್ನನ್ನು ಪ್ರತಿಭಟಿಸಿದ ಮುಖಂಡನನ್ನು ಕರೆಯಿಸಿ ಅವನಿಗೆ ಮಂತ್ರಿತ್ವವನ್ನು ಕೊಡಬೇಕಾಯಿತು. ಇದರಿಂದ ಏಷ್ಯಾಖಂಡದಲ್ಲಿ ಆಳುವ ಇತರ ರಾಜರು ಮೊದಲಿನಂತೆ ಸ್ವೇಚ್ಛಾಪ್ರವರ್ತನೆಯನ್ನು ಬಿಟ್ಟು ಪ್ರಜಾಪ್ರತಿನಿಧಿಗಳ ಅನುಮತಿಯಂತೆ ರಾಜ್ಯಭಾರಮಾಡುವುದು ಯುಕ್ತವೆಂಬುದು ಚೆನ್ನಾಗಿ ಕಂಡುಬರುತ್ತದೆ.

## ಇಂಡಿಯ

1931ರಲ್ಲಿ ನಡೆದ ಎಣಿಕೆಯಿಂದ ಇಂಡಿಯಾದೇಶದ ಜನಸಂಖ್ಯೆ 35 ಕೋಟಿ 10 ಲಕ್ಷವೆಂದು ಗೊತ್ತಾಗಿದೆ. ಇಷ್ಟರಲ್ಲಿಯೆ ಆಗುವ ಸುಧಾರಣೆಗಳು ಜಾರಿಗೆ ಬಂದಮೇಲೆ ಸಿಂಧುದೇಶವೂ, ಒರಿಸ್ಸಾವೂ ಬೇರೆ ಆಧಿಪತ್ಯಗಳಾಗುವುವು. ಆಶ್ರಿತ ಸಂಸ್ಥಾನಗಳೂ ಬ್ರಿಟಿಷ್ ಇಂಡಿಯಾದ ಆಧಿಪತ್ಯಗಳೂ ಕೆಲವು ವಿಚಾರಗಳಲ್ಲಿ ಒಟ್ಟುಗೂಡಿ ಕೆಲಸಮಾಡುವ ಸಂಭವವಿದೆ.

ಸಕ್ಕೂರಿನ ಬಳಿ ಸಿಂಧು ನದಿಯನ್ನು ಅಡ್ಡಗಟ್ಟಿ ಸಾಗುವಳಿಗೆ ನೀರನ್ನು ಒದಗಿಸುತ್ತಿರುವುದರಿಂದ ಸಾವಿರಾರು ಎಕರೆಗಳಲ್ಲಿ ಗೋಧಿ, ಹತ್ತಿ ಇವುಗಳನ್ನು ಬೆಳೆಯಲು ಆಸ್ಪದವಾಯಿತು. ದೇಶದ ಇನ್ನೂ ಕೆಲವು ಕಡೆಗಳಲ್ಲಿ ಕಬ್ಬನ್ನು ಹೆಚ್ಚಾಗಿ ಬೆಳೆದು ಸಕ್ಕರೆಯನ್ನು ತಯಾರಿಸುವುದಕ್ಕೆ ಕಂಪೆನಿಗಳನ್ನು ಸ್ಥಾಪಿಸುತ್ತಿರುವರು. ಈಗಾಗಲೇ ಹೊರಗಿನಿಂದ ಬರುವ ಸಕ್ಕರೆಯು ಕಮ್ಮಿಯಾಗಿದೆ.

ಮದರಾಸು ಆಧಿಪತ್ಯದಲ್ಲಿರುವ ವಿಶಾಖಪಟ್ಟಣದಲ್ಲಿಯೂ, ಮಲಬಾರಿನಲ್ಲಿರುವ ಕೊಚ್ಚಿನ್‌ನಲ್ಲಿಯೂ ಬಂದರುಗಳನ್ನು ಕಟ್ಟುತ್ತಿದ್ದಾರೆ. ಇವುಗಳು ಪೂರೈಸಿದ ಮೇಲೆ ಅನ್ಯದೇಶಗಳೊಡನೆ ವ್ಯಾಪಾರಮಾಡಲು, ಇನ್ನೂ ಅನುಕೂಲತೆ ಹೆಚ್ಚುವುದು.

ದೇಶದಲ್ಲಿ ನಡೆಯುತ್ತಿರುವ ಖಾದಿ ಪ್ರಚಾರದಿಂದ ಕೈಯಿಂದಲೇ ನೂಲುವ ಮತ್ತು ನೇಯುವ ಕೆಲಸಗಳಿಗೆ ಪ್ರೋತ್ಸಾಹವುಂಟಾಗಿದೆ. ಹೊರಗಿನಿಂದ ಬರುವ ಬಟ್ಟೆಯು ಸ್ವಲ್ಪ ಕಡಿಮೆಯಾಗಿದೆ; ದೇಶದಲ್ಲಿ ನೂರಾರು ಬಡಬಗ್ಗರಿಗೆ ಜೀವನೋಪಾಯವು ದೊರಕಿದೆ.

ಚೀಣಾ ದೇಶೀಯರು ಮಲಯ ಪರ್ಯಾಯ ದ್ವೀಪಗಳ ದೇಶಗಳಿಗೆ ಹೋಗುತ್ತಿರುವುದರಿಂದಲೂ, ಅಲ್ಲಿರುವ ನಮ್ಮ ದೇಶೀಯರಿಗೆ ಸರಿಯಾದ ಮುಖಂಡರಿಲ್ಲದಿರುವುದರಿಂದಲೂ ಮೊದಲಿನಂತೆ ಇಂಡಿಯಾದವರಿಗೆ ಆ ದೇಶಗಳಲ್ಲಿ ಕೆಲಸ ದೊರೆಯುವುದಿಲ್ಲ.

———————

# ಅಧ್ಯಾಯ ೩

## ಆಫ್ರಿಕಾ ಖಂಡ

ಈ ಖಂಡದ ರಾಜಕೀಯ ವಿಭಾಗಗಳನ್ನು ತೋರಿಸುವ ಪಟವನ್ನು ನೋಡಿದರೆ ಅಬಿಸೀನಿಯ, ಲೈಬೀರಿಯ, ಈಜಿಪ್ಟ್‌ದೇಶಗಳು ವಿನಾ ಉಳಿದ ವಿಭಾಗಗಳೆಲ್ಲವೂ ಯೂರೋಪಿಯರ್ನ ಜನರಿಗೆ ಸೇರಿರುವುದೆಂದು ತಿಳಿದುಬರುವುದು. ಕೆಲವು ವರ್ಷಗಳ ಹಿಂದೆ ಈಜಿಪ್ಟ್ ದೇಶವು ಬ್ರಿಟಿಷರ ರಕ್ಷಣೆಗೆ ಒಳಗಾಗಿತ್ತು. 1922ರಲ್ಲಿ ಅಲ್ಲಿನ ಸುಲ್ತಾನರಿಗೆ ರಾಜಪದವಿಯೂ, ದೇಶಕ್ಕೆ ಸ್ವಾತಂತ್ರ್ಯವೂ ದೊರೆತವು. ಆದರೂ ಬ್ರಿಟಿಷರು ಸೂಯಸ್ ಕಾಲುವೆ ಮತ್ತು ಸೂಡಾರ್ನ ದೇಶದ ವಿಚಾರಗಳಲ್ಲಿ ತಮ್ಮ ಹಕ್ಕು ಬಾಧ್ಯತೆಗಳನ್ನಿಟ್ಟುಕೊಂಡಿರುವರು. ಇವುಗಳನ್ನು ಕೂಡ ತೆಗೆದುಹಾಕಬೇಕೆಂದು ಈಜಿಪ್ಟಿನ ರಾಜಕೀಯ ಪಂಗಡ ಮುಖಂಡರು ಚಳುವಳಿ ನಡೆಯಿಸಿದರೂ ಅವರ ಪ್ರಯತ್ನಗಳು ಸಫಲವಾಗಲಿಲ್ಲ. ಮೊರಕ್ಕೊ ಸುಲ್ತಾನರು ನಿರಂಕುಶ ಪ್ರಭುತ್ವವನ್ನು ಮಾಡುತ್ತಿದ್ದರೂ ಫ್ರೆಂಚರ ರಕ್ಷಣೆಯಲ್ಲಿರುತ್ತಾರೆ. ಅಬಿಸೀನಿಯವು ಪರ್ವತಮಯವಾದ ಪ್ರದೇಶವಾಗಿರುವುದರಿಂದ ಅದರ ಸ್ವಾತಂತ್ರ್ಯವಿನ್ನೂ ಹೋಗಿಲ್ಲ. ಲೈಬೀರಿಯದಲ್ಲಿ ನೀಗ್ರೋ ಜನರು 100 ವರ್ಷಗಳ ಹಿಂದೆ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದರು. ಬ್ರಿಟಿಷ್ ದಕ್ಷಿಣ ಆಫ್ರಿಕ ಮತ್ತೂ ದಕ್ಷಿಣ ರೊಡೀಷಿಯದಲ್ಲಿ ವಾಸಿಸುವ ಯೂರೋಪಿಯರ್ನರೇ ರಾಜ್ಯಾಡಳಿತವನ್ನು ಸ್ವತಃ ನಡೆಸುವರು. ಮಿಕ್ಕ ದೇಶಗಳಲ್ಲಿ ಆಯಾ ಐರೋಪ್ಯ ಸರ್ಕಾರದ ಪ್ರತಿನಿಧಿಗಳು ರಾಜ್ಯಾಡಳಿತದ ಕಾರ್ಯಗಳನ್ನು ನಿರ್ವಹಿಸುವರು. ಜರ್ಮನಿಗೆ ಸೇರಿದ್ದ ಕಾಲೊನಿಗಳ ಪೈಕಿ ಮಹಾ ಯುದ್ಧದ ಫಲವಾಗಿ ಕಾಮರೂನ್ಸ್ ಮತ್ತು ಟೋಗೋಲ್ಯಾಂಡಿನ ಸ್ವಲ್ಪ ಭಾಗವು ಫ್ರೆಂಚರಿಗೂ, ಮಿಕ್ಕ ಟೋಗೋಲ್ಯಾಂಡಿನ ಭಾಗ, ಟ್ಯಾಂಗನೀಕ, ಜರ್ಮನಿಯ ನೈರುತ್ಯ ಆಫ್ರಿಕ ಇವು ಬ್ರಿಟಿಷರಿಗೂ ಸೇರಿದುವು.

19ನೆಯ ಶತಮಾನದಲ್ಲೂ ಬಹುಕಾಲ ಆಫ್ರಿಕಾಖಂಡದ ಉಷ್ಣವಲಯದ ಒಳಭಾಗದ ಪ್ರದೇಶಗಳನ್ನು ಅಭಿವೃದ್ಧಿ ಪಡಿಸುವ ಪ್ರಯತ್ನಗಳಾವುವೂ ನಡೆಯಲಿಲ್ಲ. ತಮ್ಮ ಕೈಗಾರಿಕೆಗಳಿಗೆ ಬೇಕಾದ ರಬ್ಬರ್, ತಾಳೆ

ಯೆಣ್ಣೆ, ಕೋಕೋ ಬಿತ್ತ ಘಟ್ಟಿಯಾದ ಮರಗಳು ಇವು ಸಿಕ್ಕುವುದನ್ನೂ, ತಾವು ಕಾರ್ಖಾನೆಗಳಲ್ಲಿ ತಯಾರಿಸಿದ ಸಾಮಾನುಗಳಿಗೆ ಸ್ವಲ್ಪಮಟ್ಟಿಗೆ ಗಿರಾಕಿ ಇರುವುದನ್ನೂ ನೋಡಿ ಯೂರೋಪಿಯರ್ನ ಜನರು ವ್ಯಾಪಾರಕ್ಕೆ ಬೇಕಾದ ಕೋಠಿಗಳನ್ನು ಕಟ್ಟಿ, ಕ್ರಮೇಣ ತಮ್ಮ ತಮ್ಮ ಪ್ರಾಬಲ್ಯವನ್ನು ಸ್ಥಿರಪಡಿಸುವುದಕ್ಕೆ ಹೊಡೆದಾಡಲಾರಂಭಿಸಿದರು. ಬ್ರಿಟಿಷ್, ಫ್ರೆಂಚ್ ಮತ್ತು ಬೆಲ್ಜಿಯಂ ದೇಶದವರಿಗೆ ಹೆಚ್ಚು ಪ್ರದೇಶವು ಸಿಕ್ಕಿತು. ಇವರನ್ನು ನೋಡಿ ಜರ್ಮನಿಯವರೂ, ಇಟಲಿಯವರೂ, ಕಾಲೊನಿಗಳನ್ನು ಸಂಪಾದಿಸಲು ಪ್ರಯತ್ನಮಾಡಿದರು. ಆದರೆ ಇವರು ಈ ಕೆಲಸದಲ್ಲಿ ಹಿಂದಾದರು.

ಆಫ್ರಿಕಾಖಂಡವು ಯೂರೋಪಿಯರ್ನ ಜನರ ವಶಕ್ಕೆ ಬಂದಮೇಲೆ ಅದರ ಸಂಪದಭಿವೃದ್ಧಿಯನ್ನು ಮಾಡುವ ಕಾರ್ಯಗಳು ನಡೆದಿವೆ. ರೇವು ಪಟ್ಟಣಗಳಿಂದ ಒಳಭಾಗದಲ್ಲಿ ಸಿಕ್ಕುವ ಪದಾರ್ಥಗಳನ್ನು ಸಾಗಿಸಲು ರೈಲು ಮಾರ್ಗಗಳು ಹಾಕಲ್ಪಟ್ಟಿವೆ. ಈಚೆಗೆ ರಸ್ತೆಗಳಾಗಿವೆ; ವಿಮಾನ ಸಂಚಾರವೂ ಪ್ರಚಾರಕ್ಕೆ ಬಂದಿದೆ.

**ಸುಯಸ್ ಕಾಲುವೆ.** *—ಸುಯಸ್ ಕಾಲುವೆಯ ಉದ್ದ 103 ಮೈಲಿಗಳು. ತಳದಲ್ಲಿ ಕನಿಷ್ಠಪಕ್ಷ 150 ಅಡಿ ಅಗಲ ಇರುವುದು. ಇದರ ಆಳವು 33 ಅಡಿಗಳು. ದಡಗಳು ಕುಸಿದು ಹೋಗದಂತೆ ಅಲ್ಲಲ್ಲಿ ಕಲ್ಕಟ್ಟಡಗಳನ್ನು ಕಟ್ಟಿರುವರು. ಕಾಲುವೆಯು ಹಡಗುಗಳ ಸಂಚಾರಕ್ಕೆ ಸರಿಯಾಗಿರುವಂತೆ ಬೇಕಾದ ಏರ್ಪಾಡುಗಳನ್ನು ಸುಯಸ್ ಕಾಲುವೆ ಕಂಪೆನಿಯವರು ಮಾಡುವರು. ಇದರ ಪಕ್ಕದಲ್ಲಿ ಸಿಹಿನೀರಿನ ಕಾಲುವೆಯು ಹರಿಯುವುದು. ಸುಯುಸ್ ಕಾಲುವೆಯ ಎರಡು ಕಡೆಗಳಲ್ಲಿಯೂ ಮರಳುಗಾಡು ಕಂಡುಬರುವುದು. ಪ್ರತಿವರ್ಷವೂ 5,000 ಹಡಗುಗಳು ಇದರ ಮಾರ್ಗವಾಗಿ ಪ್ರಯಾಣಮಾಡುವುವು. ಇದರಲ್ಲಿ ಸಂಚರಿಸುವ ಹಡಗುಗಳಲ್ಲಿ $\frac{3}{5}$ ಭಾಗದಷ್ಟು ಬ್ರಿಟಿಷರವು.

ಆಫ್ರಿಕದಲ್ಲಿ ಬಿಳಿಯ ಜನರ ಸಂಖ್ಯೆ ಕಡಿಮೆ; ಕಪ್ಪು ಜನರೇ ಹೆಚ್ಚಾಗಿರುವರು. ನೀಗ್ರೋಜನರಲ್ಲಿಯೂ ಕೆಲವರು ವಿದ್ಯಾವಂತರಾಗುತ್ತಿದಾರೆ. ಕಪ್ಪುಜನರೇ ಅಧಿಕವಾಗಿರುವ ಖಂಡದಲ್ಲಿ ರಾಜ್ಯಭಾರಕ್ರಮ ಸರಿಯಾಗಿ ನಡೆದು ಪರಸ್ಪರ ಅನ್ಯೋನ್ಯಭಾವವುಂಟಾಗುವುದು ಕಷ್ಟಸಾಧ್ಯವಾಗಿದೆ.

---

* 277ನೆಯ ಪುಟವನ್ನು ನೋಡಿ.

# ಅಧ್ಯಾಯ ೪

## ಉತ್ತರ ಅಮೆರಿಕ ಖಂಡ

ಈ ಖಂಡದ ಜನಸಂಖ್ಯೆ 14½ ಕೋಟಿ. ಮೆಕ್ಸಿಕೋ, ಮಧ್ಯ ಅಮೆರಿಕ, ಇವು ಉತ್ತರ ಅಮೆರಿಕ ಖಂಡಕ್ಕೆ ಸೇರಿದ್ದರೂ ಇವುಗಳು ಕೆನಡಾ ಮತ್ತು ಸಂಯುಕ್ತ ಸಂಸ್ಥಾನಗಳಂತೆ ಸಂಪದಭಿವೃದ್ಧಿಯಲ್ಲಿ ಮುಂದುವರಿದಿಲ್ಲ. ರಾಜ್ಯಭಾರ ಕ್ರಮವು ಹೆಸರಿಗೆ ಪ್ರಜಾ ಪ್ರಭುತ್ವವಾದರೂ ದೇಶಗಳಲ್ಲಿ ಶಾಂತಿಯು ನೆಲಸಿಲ್ಲ. ಆಗಾಗ್ಗೆ ಒಳದೇಶದ ಯುದ್ಧಗಳಾಗುವುವು. ಇದೇ ಸ್ಥಿತಿಯು ದಕ್ಷಿಣ ಅಮೆರಿಕದ ದೇಶಗಳಲ್ಲಿಯೂ ಕಂಡುಬರುವುದು. ಇಲ್ಲಿನ ಜನರು ಲಾಟಿನ್ ಭಾಷೆಯಿಂದ ಹುಟ್ಟಿದ ಸ್ಪ್ಯಾನಿಷ್ ಅಥವಾ ಪೋರ್ಚುಗೀಸ್ ಭಾಷೆಯನ್ನಾಡುವರು. ಆದುದರಿಂದ ಮೆಕ್ಸಿಕೋ, ಮಧ್ಯ ಅಮೆರಿಕ, ದಕ್ಷಿಣ ಅಮೆರಿಕ, ಇವೆಲ್ಲವನ್ನೂ ಲಾಟಿನ್ ಅಮೆರಿಕವೆಂದು ಕರೆಯುವುದು ವಾಡಿಕೆಯಾಗಿದೆ.

ಉತ್ತರ ಅಮೆರಿಕ ಖಂಡದ ಸಂಯುಕ್ತ ಸಂಸ್ಥಾನಗಳು ಮಹಾಯುದ್ಧವಾದ ಅನಂತರ ಬಹಳ ಪ್ರಾಮುಖ್ಯತೆಗೆ ಬಂದುವು. 19ನೇ ಶತಮಾನದಲ್ಲಿ ಆಹಾರ ಸಾಮಗ್ರಿಗಳು, ಹತ್ತಿ ಮೊದಲಾದ ಸಾಮಾನುಗಳು, ರಫ್ತಾಗುತಿದ್ದುವು. ಈಗ ತಯಾರಿಸಿದ ಪದಾರ್ಥಗಳು, ಯಂತ್ರಗಳು, ಇವೇ ಅರ್ಧಕ್ಕಿಂತ ಹೆಚ್ಚಾಗಿ ರಫ್ತಾಗುವುವು. ಸಂಯುಕ್ತ ಸಂಸ್ಥಾನಗಳು ಪೆಟ್ರೋಲಿಯಂ ಎಣ್ಣೆಯ ಉತ್ಪತ್ತಿಯಲ್ಲಿಯೂ, ಹತ್ತಿ ಬೆಳೆಯಲ್ಲಿಯೂ ಅಗ್ರಸ್ಥಾನವನ್ನು ಹೊಂದಿ ಇವೆರಡನ್ನೂ ರಫ್ತು ಮಾಡಿದರೂ, ದಕ್ಷಿಣ ಅಮೆರಿಕದಿಂದ ಪೆಟ್ರೋಲಿಯಂ ಈಜಿಪ್ಟಿನಿಂದ ಹಸನಾದ ಹತ್ತಿ, ಇವು ಆಮದಾಗುವುವು.

ಎರಡು ಕೋಟಿಗಳಿಗಿಂತ ಹೆಚ್ಚಾಗಿಯೇ ಮೋಟಾರು ಗಾಡಿಗಳೂ ಬಸ್ಸುಗಳೂ ಸಂಯುಕ್ತ ಸಂಸ್ಥಾನಗಳಲ್ಲಿವೆ. ಇನ್ನಾವ ದೇಶದಲ್ಲಿಯೂ ಇಷ್ಟಿಲ್ಲ. ವಾಯುಮಾರ್ಗಗಳು ದೇಶದಲ್ಲೆಲ್ಲಾ ಏರ್ಪಾಡಾಗಿವೆ. ರಾತ್ರಿ

ಹಗಲೂ ವಿಮಾನಗಳು ಸಂಚರಿಸುವುವು. ನ್ಯೂಯಾರ್ಕ್ ಪಟ್ಟಣದಿಂದ 3,000 ಮೈಲಿ ದೂರವಿರುವ ಸ್ಯಾನ್‌ಫ್ರಾನ್ಸಿಸ್ಕೋವಿಗೆ 30 ಗಂಟೆಗಳಲ್ಲಿ ಪ್ರಯಾಣ ಮಾಡಬಹುದು.

ಅನ್ಯದೇಶಗಳೊಡನೆ ವ್ಯಾಪಾರವು ಸುಲಭವಾಗಿ ನಡೆಯುವುದಕ್ಕೆ ಸೇಂಟ್‌ಲಾರೆನ್ಸ್ ನದಿಯ ಜಲಮಾರ್ಗವನ್ನು ಆಳಮಾಡಿ, ದೊಡ್ಡ ದೊಡ್ಡ ಹಡಗುಗಳು ಸಮುದ್ರದಿಂದ ಒಳದೇಶದಲ್ಲಿರುವ ಮಹಾ ಸರೋವರಗಳ ವರೆಗೂ ಸಂಚರಿಸುವಂತೆ ಅನುಕೂಲಪಡಿಸಬೇಕೆಂದು, ಹೋದ ವರ್ಷ ಸಂಯುಕ್ತ ಸಂಸ್ಥಾನಗಳ ಸರ್ಕಾರದವರು ಕೆನಡಾ ದೇಶದ ಸರ್ಕಾರದವ ರೊಡನೆ ಒಪ್ಪಂದಮಾಡಿಕೊಂಡರು.

ಈ ದೇಶದ ವ್ಯಾಪಾರವು * ಮುಖ್ಯವಾಗಿ ಕೆನಡಾ, ಬ್ರಿಟಿಷ್ ದ್ವೀಪ ಗಳು, ಜಪಾನ್, ಜರ್ಮನಿ, ಇವುಗಳೊಡನೆಯೂ ಮತ್ತು ಇತರ ದೇಶ ಗಳೊಡನೆ ಸಾಮಾನ್ಯವಾಗಿಯೂ ನಡೆಯುತ್ತಿರುವುದು. ಪ್ರಪಂಚದ ಮುಖ್ಯ ವಾದ ದೇಶಗಳಲ್ಲಿ ಯಾವ ಯಾವ ಪದಾರ್ಥಗಳು ಸಿಕ್ಕುವುವು, ಅಲ್ಲಿ ಮಾರಾಟವಾಗಬಹುದಾದ ಸಾಮಾನುಗಳಾವುವು ಎಂಬ ವಿಷಯವನ್ನು ತಿಳಿಯಲು ತಕ್ಕ ಶಿಬ್ಬಂದಿಯನ್ನಿಟ್ಟಿರುತ್ತಾರೆ.

ಈ ದೇಶದಲ್ಲಿ 48 ಸಂಸ್ಥಾನಗಳಿರುವುವು. ಇದಕ್ಕೆ ಅಲಾಸ್ಕ ; ವೆಸ್ಟಿಂಡಿಯಾ ದ್ವೀಪಗಳಲ್ಲಿ ಪೋರ್ಟರೀಕೋ ದ್ವೀಪವೂ ; ಪೆಸಿಫಿಕ್ ಸಾಗ ರದಲ್ಲಿ ಫಿಲಿಪ್ಪೈನ್, ಹ್ಯಾವಾಯಿ, ಗ್ವಾಮ್, ಸಾಮೊವ ದ್ವೀಪಗಳೂ ; ಅಟ್ಲಾಂಟಿಕ್ ಸಾಗರದಲ್ಲಿ ವರ್ಜಿನ್ ದ್ವೀಪಗಳೂ, ಸೇರಿವೆ. ಕೆಲವು ವರ್ಷಗಳ ಕಾಲದಲ್ಲಿ ಫಿಲಿಪ್ಪೈನ್ ದ್ವೀಪಗಳು ಸ್ವಾತಂತ್ರ್ಯವನ್ನು ಹೊಂದ ಬಹುದು.

ಕೆನಡಾ ರಾಜ್ಯದ ಜನಸಂಖ್ಯೆ 1 ಕೋಟಿ 3½ ಲಕ್ಷ. ದೇಶದ ದಕ್ಷಿಣ ಭಾಗದಲ್ಲೇ ಜನಸಾಂದ್ರತೆಯು ಹೆಚ್ಚಾಗಿರುವುದು. ಇದಕ್ಕೆ ಇಲ್ಲಿನ ಸನ್ನಿ ವೇಶವೂ, ವಾಯುಗುಣವೂ ಕಾರಣಗಳು.

ಮೊದಲು ಕೆನಡಾದಿಂದ ಆಹಾರ ಸಾಮಗ್ರಿಗಳೂ, ಕೈಗಾರಿಕೆಗಳಿಗೆ ಬೇಕಾದ ಸಾಮಾನುಗಳೂ, ರಫ್ತಾಗುತ್ತಿದ್ದುವು. ಈಚೆಗೆ ದೇಶದಲ್ಲ ದೊರೆ ಯುವ ಸಸ್ಯ, ಪ್ರಾಣಿ, ಖನಿಜ, ಇವುಗಳ ಸಂಪತ್ತನ್ನುಪಯೋಗಿಸಿ ಪದಾ ರ್ಥಗಳನ್ನು ತಯಾರಿಸಿರುತ್ತಾರೆ.

---

* 382ನೆಯ ಪುಟ.

ನೀರಿನಿಂದ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವುದರಲ್ಲಿ ಸಂಯುಕ್ತ ಸಂಸ್ಥಾನಗಳು ಪ್ರಪಂಚದಲ್ಲೆಲ್ಲಾ ಮೊದಲನೆಯವು ; ಎರಡನೆಯದು ಕೆನಡ. ದೇಶದ ಬಹುಭಾಗದಲ್ಲಿ ನೀರು ಸಮೃದ್ಧಿಯಾಗಿರುವುದರಿಂದ ವಿದ್ಯುಚ್ಛಕ್ತಿಯು ಅಗ್ಗವಾಗಿ ದೊರೆಯುವುದು. ಇದು ಕೈಗಾರಿಕೆಗಳ ಅಭಿವೃದ್ಧಿಗೆ ಬಹಳ ಸಹಕಾರಿಯಾಗಿದೆ.

ಕಾಗದವನ್ನು ಮತ್ತು ಮರದ ತಿರುಳನ್ನೂ (Wood pulp) ತಯಾರುಮಾಡುವುದು ಮುಖ್ಯ ಕೈಗಾರಿಕೆ. ಈಚೆಗೆ ಸಂಯುಕ್ತ ಸಂಸ್ಥಾನಗಳ ಕಂಪನಿಗಳು ಕೆನಡಾದಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿ ಅವುಗಳಲ್ಲಿ ತಯಾರಿಸಿದ ಮೋಟಾರ್‌ಗಾಡಿ ಮೊದಲಾದುವನ್ನು ಪ್ರಪಂಚದ ಇತರ ದೇಶಗಳಿಗೆ ರಫ್ತು ಮಾಡುತ್ತಿವೆ.

ಕೆನಡಾ ದೇಶದ ಜನರು ಹೆಚ್ಚಾಗಿ ಸಂಯುಕ್ತ ಸಂಸ್ಥಾನಗಳೊಡನೆಯೂ, ಬ್ರಿಟಿಷ್ ದ್ವೀಪಗಳೊಡನೆಯೂ, ವ್ಯಾಪಾರ ಮಾಡುವರು. ಹೋದ ವರ್ಷ ನಡೆದ ಒಟಾವ ವ್ಯಾಪಾರದ ಒಪ್ಪಂದದಂತೆ ಬ್ರಿಟಿಷ್ ದ್ವೀಪಗಳೊಡನೆಯೂ, ಬ್ರಿಟಿಷ್ ಚಕ್ರಾಧಿಪತ್ಯದ ಇತರ ಭಾಗಗಳೊಡನೆಯೂ, ನಡೆವ ಕೆನಡಾ ದೇಶದ ವ್ಯಾಪಾರವು ಹೆಚ್ಚಾಗಬಹುದು. ಇದರಿಂದ ಕೈಗಾರಿಕೆಗಳಿಗೆ ಇನ್ನೂ ಉತ್ತೇಜನ ಸಿಕ್ಕಬಹುದು.

## ಅಲಾಸ್ಕ

ಅಲಾಸ್ಕಾವು ರಷ್ಯಕ್ಕೆ ಸೇರಿತ್ತು. ಇದನ್ನು ಸಂಯುಕ್ತ ಸಂಸ್ಥಾನದವರು 1869ರಲ್ಲಿ ಖರೀದಿಗೆ ತೆಗೆದುಕೊಂಡರು. ಇಲ್ಲಿ 60,000 ಜನರು ವಾಸಿಸುವರು. ಒಳಪ್ರದೇಶವು ಎತ್ತರವಾದ 'ಟಂಡ್ರ' ಪ್ರದೇಶವಾಗಿದೆ. ತೀರ ಪ್ರದೇಶಗಳು ಮಾತ್ರ ಸಮಶೀತೋಷ್ಣಗಳಾಗಿವೆ.

ಬೇಸಗೆಯಲ್ಲಿ ಶಾಖ ಕಡಿಮೆಯಾಗಿರುವುದರಿಂದ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯಲು ಸಾಧ್ಯವಿಲ್ಲ. ತೀರ ಪ್ರದೇಶದ ಬಳಿಯಲ್ಲಿರುವ ಬೆಟ್ಟಗಳಲ್ಲಿ ಕಾಡುಗಳಿವೆ.

ಮೊದಲು ಚಿನ್ನದ ಆಸೆಯಿಂದ ಜನರು ಅಲಾಸ್ಕಾಕ್ಕೆ ನುಗ್ಗಿದರು. ಈಗಲೂ ಚಿನ್ನ, ತಾಮ್ರ ಮತ್ತು ಕಲ್ಲಿದ್ದಲನ್ನು ತೆಗೆಯುತ್ತಾರೆ. ಮೀನನ್ನು ಹಿಡಿಯುವುದು ಇನ್ನೊಂದು ಮುಖ್ಯವಾದ ಉದ್ಯೋಗ.

ಅಲಾಸ್ಕಾವು ಶೀತಪ್ರದೇಶದಲ್ಲಿರುವುದರಿಂದ ಇಲ್ಲಿನ ಪ್ರಾಣಿಗಳಿಗೆ ದಪ್ಪವಾದ ಚರ್ಮವೂ ಒತ್ತಾಗಿ ಬೆಳದಿರುವ ಉದ್ದವಾದ ಕೂದಲೂ ಇವೆ. ಇವನ್ನು ಸಾಕುವುದು ಒಂದು ಕಸಬಾಗಿದೆ. ಇವುಗಳ ಚರ್ಮವನ್ನು ರಪ್ತು ಮಾಡುವರು.

ಈ ದೇಶದ ಕೆಲವು ಭಾಗಗಳಲ್ಲಿ ಹಿಮಸಾರಂಗವು ಸಿಕ್ಕುವುದು. ಇದರ ಮಾಂಸವನ್ನು ಕೆನಡ ಮತ್ತು ಸಂಯುಕ್ತ ಸಂಸ್ಥಾನಗಳಿಗೆ ಕಳುಹಿಸುವರು. ಮುಂದೆ ಈ ಪ್ರಾಣಿಗಳನ್ನು ಸಾಕುವುದೇ ಒಂದು ಉದ್ಯೋಗವಾಗಿ ಪರಿಣಮಿಸಬಹುದು.

ಅಲಾಸ್ಕಾದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಿ ಬರುವುದೇ ಕಷ್ಟ. ಬೇಸಗೆಯಲ್ಲಿ ಕಾನ್ ನದಿಯ ಮಾರ್ಗವಾಗಿ ಹಡಗುಗಳು ಸಂಚರಿಸುವುವು. ಸಮುದ್ರ ತೀರದಿಂದ ಈ ನದಿಯ ಕಣಿವೆಯ ಮಾರ್ಗವಾಗಿ ರೈಲು ಹಾಕಲ್ಪಟ್ಟಿದೆ.

## ಮೆಕ್ಸಿಕೋ

ಈ ದೇಶದ ಜನಸಂಖ್ಯೆ 1 ಕೋಟಿ 65 ಲಕ್ಷ. ಮೆಕ್ಸಿಕೋದಲ್ಲಿ ಖನಿಜಗಳನ್ನು ತೆಗೆಯುವುದೇ ಮುಖ್ಯೋದ್ಯೋಗ. ಪ್ರಪಂಚದಲ್ಲೆಲ್ಲಾ ಹೆಚ್ಚು ಬೆಳ್ಳಿ ಸಿಕ್ಕುವುದು ಇಲ್ಲೇ. ಸೀಸ, ಪೆಟ್ರೋಲಿಯಂ, ತಾಮ್ರ ಮತ್ತು ಚಿನ್ನ ಇವು ದೊರೆಯುವುವು.

ಹತ್ತಿ, ಜೋಳ, ಗೋಧಿ, ಕಬ್ಬು, ಹಣ್ಣು ಇವು ಮುಖ್ಯ ಬೆಳೆಗಳು. ಈಚೆಗೆ ಯುಕರ್ಟಾ ಪರ್ಯಾಯ ದ್ವೀಪದಲ್ಲಿ ಕತ್ತಾಳೆ ನಾರನ್ನು ಬೆಳೆದು ಅದರ ನಾರನ್ನು ಸಂಯುಕ್ತ ಸಂಸ್ಥಾನಗಳಿಗೆ ಕಳುಹಿಸುವರು.

ಈ ದೇಶದ ಕೈಗಾರಿಕೆಗಳು ಶೈಶವಾವಸ್ಥೆಯಲ್ಲಿರುವುವು. ಪ್ರತಿ ದೇಶದಲ್ಲಿಯೂ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡಬೇಕೆಂಬ ಧ್ಯೇಯವನ್ನನುಸರಿಸಿ, ಹೊರಗಿನಿಂದ ಬರುವ ಸಾಮಾನುಗಳಿಗೆ ಸುಂಕವನ್ನು ಹೆಚ್ಚಿಸಿರುವುದರಿಂದ, ಮೆಕ್ಸಿಕೋವಿನಲ್ಲಿಯೂ ಕೆಲವು ಕೈಗಾರಿಕೆಗಳು ಪ್ರಾರಂಭವಾಗಿವೆ. ಇವಾವುವೆಂದರೆ––ಸಕ್ಕರೆ ಮತ್ತು ಮದ್ಯಗಳನ್ನು ಮಾಡುವುದು, ಹತ್ತಿ ಮತ್ತು ಉಣ್ಣೆಯ ಬಟ್ಟೆಗಳನ್ನು ನೇಯುವುದು, ಲೋಹದ ಮತ್ತು ಗಾಜಿನ ಸಾಮಾನುಗಳನ್ನು ತಯಾರಿಸುವುದು, ಚುಟ್ಟಾಗಳನ್ನು ಮಾಡುವುದು_ಇವೇ.

## ಮಧ್ಯ ಅಮೆರಿಕ

ಮಧ್ಯ ಅಮೆರಿಕದಲ್ಲಿ ಕೃಷಿಯೇ ಮುಖ್ಯೋದ್ಯೋಗ. ಪೆಸಿಫಿಕ್ ಸಮುದ್ರದ ಕಡೆಗೆ ಇಳಿಜಾರಾಗಿರುವ ಪರ್ವತ ಪ್ರದೇಶದಲ್ಲಿ ಕಾಫಿ ತೋಟಗಳೂ, ಪೂರ್ವತೀರ ಪ್ರದೇಶಗಳಲ್ಲಿ ಬಾಳೆಯ ತೋಟಗಳೂ ಇವೆ. ಕೆರಿಬಿಯನ್ ಸಮುದ್ರದ ಬಳಿ ಇರುವ ದೇಶಗಳಲ್ಲಿ ಪ್ರತಿ ವರ್ಷವೂ 7 ಕೋಟಿಯಷ್ಟು ಬಾಳೆಯ ಗೊನೆಗಳನ್ನು ಬೆಳೆದು ಸಂಯುಕ್ತ ಸಂಸ್ಥಾನಗಳಿಗೂ, ಬ್ರಿಟಿಷ್ ದ್ವೀಪಗಳಿಗೂ ರಫ್ತು ಮಾಡುವರು. ಮಧ್ಯ ಅಮೆರಿಕದಲ್ಲಿ ಬೆಳೆಯುವ ಬಾಳೆಯ ತೋಟಗಳ ಕೆಲಸವನ್ನೆಲ್ಲಾ ಯುನೈಟೆಡ್ ಫ್ರೂಟ್ ಕಂಪನಿಯೆಂಬುದು ನಿರ್ವಹಿಸುತ್ತಿದೆ.

ಮಧ್ಯ ಅಮೆರಿಕದ ದೇಶಗಳಲ್ಲಿ ಆಗಾಗ್ಗೆ ಗಲಭೆಗಳುಂಟಾಗುವುವು. ಹೀಗಿದ್ದರೂ ಜನರು ಮುಂದುವರಿಯುತ್ತಿದಾರೆ.

**ಕ್ಯೂಬ**—ಇದು ವೆಸ್ಟಿಂಡಿಯಾ ದ್ವೀಪಗಳಲ್ಲೆಲ್ಲಾ ದೊಡ್ಡದು. ಇದರ ಜನ ಸಂಖ್ಯೆ 36½ ಲಕ್ಷ. ಪ್ರಪಂಚದಲ್ಲೆಲ್ಲಾ ಹೆಚ್ಚು ಕಬ್ಬು ಇಲ್ಲಿ ಬೆಳೆಯುವುದು. ಹೊಗೆಯಸೊಪ್ಪು ಇನ್ನೊಂದು ಬೆಳೆ. ಮುಖ್ಯ ಪಟ್ಟಣವಾದ ಹವನವು (ಅಥವಾ ಹಬನ) ರೇವುಪಟ್ಟಣವೂ ಆಗಿದೆ. ಹವನ ಚುಟ್ಟಾಗಳು ಹೆಸರುವಾಸಿಯಾಗಿವೆ. ಇಲ್ಲಿಂದ ವಿಶೇಷವಾಗಿ ಸಕ್ಕರೆ ಮತ್ತು ಚುಟ್ಟಾಗಳು ರಫ್ತಾಗುವುವು.

ಕ್ಯೂಬ **ಈಗ** ಸ್ವತಂತ್ರವಾದ ಪ್ರಜಾಪ್ರಭುತ್ವವಾಗಿದ್ದರೂ * ಸಂಯುಕ್ತ ಸಂಸ್ಥಾನಗಳ ಉದಾರಾಶ್ರಯಕ್ಕೆ ಪಾತ್ರವಾಗಿದೆ. ಅಮೆರಿಕದವರು ಇಲ್ಲಿನ ಕಬ್ಬಿನ ತೋಟಗಳಿಗೆ ಬಹಳ ಹಣವನ್ನು ಬಂಡವಾಳವಾಗಿ ಕೊಟ್ಟಿರುವರು.

---

* 384ನೆಯ ಪುಟ.

# ಅಧ್ಯಾಯ ೫

## ದಕ್ಷಿಣ ಅಮೆರಿಕ ಖಂಡ

ಹುಡುಗರು ಓದುವ ಪಠ್ಯ ಪುಸ್ತಕಗಳಲ್ಲಿ ದಕ್ಷಿಣ ಅಮೆರಿಕ ಖಂಡದ ವಿವರಣೆಯನ್ನು ಸ್ವಲ್ಪ ಪುಟಗಳಲ್ಲಿಯೇ ಮುಗಿಸುವುದು ಪದ್ಧತಿಯಾಗಿದೆ. ಮೂವತ್ತು ವರ್ಷಗಳಿಂದೀಚೆಗೆ ಈ ಖಂಡವು ಮುಂದುವರಿದಿದೆ. ಮಹಾ ಯುದ್ಧವಾದ ಬಳಿಕ ಕೆಲವು ದೇಶಗಳು ಬಹಳ ಪ್ರಾಮುಖ್ಯತೆಗೆ ಬಂದಿವೆ. ಆದುದರಿಂದ ಈ ದೇಶಗಳ ಜನರ ವಿಚಾರವನ್ನು ಚೆನ್ನಾಗಿ ತಿಳಿಯುವುದು ಆವಶ್ಯಕ. ಈ ವಿಶೇಷ ಸಂಚಿಕೆಯಲ್ಲಿ ಇದು ಸಾಧ್ಯವಿಲ್ಲವಾದರೂ ಉಪಯುಕ್ತವಾದ ಅಂಶಗಳನ್ನು ಮಾತ್ರ ಕೊಟ್ಟಿದೆ. ಭೂವಿವರಣೆಯ ಎರಡನೆಯ ಪುಸ್ತಕದ ಹೊಸ ಮುದ್ರಣದಲ್ಲಿ ಹೆಚ್ಚು ವಿಷಯಗಳು ವಿಶದವಾಗಿ ತಿಳಿಸಲ್ಪಡುವುವು.

ಈ ಖಂಡದ ಜನಸಂಖ್ಯೆ ಸುಮಾರು 7 ಕೋಟಿ. ಬ್ರಿಟಿಷ್, ಫ್ರೆಂಚ್, ಡಚ್, ಜನರಿಗೆ ಸೇರಿದ ಗಿಯಾನಾದೇಶವನ್ನು ಬಿಟ್ಟರೆ ಇಲ್ಲಿ ಹತ್ತು ರಾಜಕೀಯ ವಿಭಾಗಗಳಿರುವುವು. ಅರ್ಜೆಂಟೈನ, ಬ್ರೆಜಿಲ್ ಮತ್ತು ಚಿಲಿದೇಶಗಳು ಮುಖ್ಯವಾದುವು. ಸಮಶೀತೋಷ್ಣ ಪ್ರದೇಶಗಳು ಉಷ್ಣವಲಯದ ಪ್ರದೇಶಗಳಿಗಿಂತ ಹೆಚ್ಚು ಅಭಿವೃದ್ಧಿಗೆ ಬಂದಿವೆ.

ದಕ್ಷಿಣ ಅಮೆರಿಕ ಖಂಡವು ಯೂರೋಪಿಗೆ ಉತ್ತರ ಅಮೆರಿಕಕ್ಕಿಂತ ಹತ್ತಿರದಲ್ಲಿದೆ. ಬ್ರಿಟಿಷರೂ, ಜರ್ಮನರೂ ಇಲ್ಲಿಯದೇಶಗಳೊಡನೆ ಬಹು ಕಾಲದಿಂದ ವ್ಯಾಪಾರ ಮಾಡುತ್ತಿದ್ದಾರೆ. ಮಹಾ ಯುದ್ಧವಾದ ಅನಂತರ ಸಂಯುಕ್ತ ಸಂಸ್ಥಾನದವರು ದಕ್ಷಿಣ ಅಮೆರಿಕದೊಡನೆ ಹೆಚ್ಚು ವ್ಯಾಪಾರ ಮಾಡಲು ಅವಕಾಶ ದೊರೆಯಿತು. ಬ್ರೆಜಿಲ್, ಅರ್ಜೆಂಟೈನ, ಪೆರು ಇವುಗಳಲ್ಲಿ ಅಮೆರಿಕದ ಕಂಪೆನಿಗಳು ಸ್ಥಾಪಿತವಾಗಿವೆ. ಇವು ಆಹಾರ ಸಾಮಗ್ರಿಗಳನ್ನು ತಯಾರಿಸುವ ಕೆಲವು ಕೈಗಾರಿಕೆಗಳನ್ನು ನಡೆಸುವುವು; ಇಲ್ಲವೆ, ತಾಮ್ರ ಮೊದಲಾದ ಖನಿಜಗಳನ್ನು ತೆಗೆಯುವುವು.

ಈ ಖಂಡದ ಮೇಲ್ಮೈಯಿಂದ ಅದರ ಬಹುಭಾಗಗಳಿಗೆ ಹೋಗಿ ಬರುವುದು ಕಷ್ಟತರವಾದುದೆಂಬುದು ಸ್ಪಷ್ಟವಾಗುವುದು. ಈಚೆಗೆ ವಿಮಾನ ಸಂಚಾರವು ಈ ಕುಂದಕವನ್ನು ನಿವಾರಣೆ ಮಾಡುತ್ತಿದೆ. ಜರ್ಮನರು ದಕ್ಷಿಣ ಅಮೆರಿಕಾಕ್ಕೆ ವಿಮಾನ ಸಂಚಾರವನ್ನು ಏರ್ಪಡಿಸುತ್ತಿದಾರೆ.

ದಕ್ಷಿಣ ಅಮೆರಿಕದ ಸಸ್ಯಗಳನ್ನೂ ಖನಿಜಗಳನ್ನೂ 392-3 ಮತ್ತು 395ನೆಯ ಪುಟಗಳಲ್ಲಿ ವಿವರಿಸಿದೆಯಷ್ಟೆ. ಬ್ರೆಜಿಲ್ ದೇಶದ ರಬ್ಬರ್ ವ್ಯಾಪಾರವು ಕಡಿಮೆಯಾಯಿತು. ಕಾಡಿನಲ್ಲಿ ಬೆಳೆಯುವ ರಬ್ಬರ್ ಗಿಡಗಳಿಂದ ರಸವನ್ನು ಹಿಡಿದು ರಬ್ಬರನ್ನು ಮಾಡುವದಕ್ಕೆ ಹೆಚ್ಚು ವೆಚ್ಚವಾಗುವುದು. ಅನಾರೋಗ್ಯವಾದ ಅಮಜಾ಼ ಕಾಡುಗಳಲ್ಲಿ ಕೆಲಸಮಾಡಲು ಜನರು ಸಿಕ್ಕುವದಿಲ್ಲ. ಮಲಯ ಪರ್ಯಾಯ ದ್ವೀಪದಲ್ಲಿಯೂ, ಸಿಲೋನಿನಲ್ಲಿಯೂ ರಬ್ಬರು ತೋಟಗಳನ್ನು ಮಾಡಿ ಅವುಗಳಿಂದ ಬೇಕಾದಷ್ಟು ರಬ್ಬರನ್ನು ತಯಾರಿಸುವರು. ಯಕ್ವಡಾರ್ ದೇಶದಲ್ಲಿ ಕೋಕೋ ಬೆಳೆಗೆ ರೋಗತಟ್ಟಿ ಬೆಳೆಯು ಕಡಿಮೆಯಾಯಿತು. ಅರ್ಜೆಂಟೈನದಲ್ಲಿ ಗೋಧಿ, ಜೋಳ ಮತ್ತು ಅಗಸೇನಾರು ಮುಖ್ಯವಾದ ಬೆಳೆಗಳು. ಬ್ರೆಜಿಲ್‌ನಲ್ಲಿ ಕಾಫಿಯು ವಿಶೇಷವಾಗಿ ಬೆಳೆಯುವದರಿಂದ ಅದಕ್ಕೆ ಗಿರಾಕಿಯಿಲ್ಲದೆ ಹೋಗಿ ಸ್ವಲ್ಪ ಕಾಫಿಯನ್ನು ಕಳೆದ ವರ್ಷ ಎಂಜನ್ನಿಗೆ ಸೌದೆಯಂತೆ ಉಪಯೋಗಿಸಿಸುಡಬೇಕಾಯಿತು. ಚಿಲಿಯಲ್ಲಿ ದೊರೆಯುವ ಪೆಟ್ಲುಪ್ಪಿಗೆ ಮೊದಲಿನಂತೆ ಮಾರಾಟವಿಲ್ಲ. ನಮ್ಮ ದೇಶದಲ್ಲಿ ಬೆಳೆಯಾಗುವ ನೀಲಿಯನ್ನು ಜರ್ಮನರು ರಾಸಾಯನಿಕ ಶಾಸ್ತ್ರ ಪದ್ಧತಿಗಳನ್ನನುಸರಿಸಿ ತಯಾರಿಸುವಂತೆ ನಾರ್ವೆ, ಸ್ವೀಡ್ನ್ ಮೊದಲಾದ ದೇಶದವರು ಗೊಬ್ಬರಗಳನ್ನು ಸಾರಜನಕದ ಮತ್ತು ವಿದ್ಯುಚ್ಛಕ್ತಿಯ ಸಂಯೋಜನದಿಂದ ತಯಾರುಮಾಡುವುದರಿಂದ ಪೆಟ್ಲುಪ್ಪನ್ನು ಕೊಳ್ಳುವುದಿಲ್ಲ.

ಪ್ರಪಂಚದಲ್ಲಿ ಉತ್ಪತ್ತಿಯಾಗುವ ತವರದ ನಾಲ್ಕನೆಯ ಒಂದು ಭಾಗವು ಬೊಲಿವಿಯದೇಶದಲ್ಲಿ ಸಿಕ್ಕುವುದು. ಇದು ಬಹಳ ಎತ್ತರವಾದ ಪರ್ವತ ಪ್ರದೇಶದಲ್ಲಿ ದೊರಕುವದರಿಂದ ಇದರ ಅದುರನ್ನು ಸಾಗಿಸಲು ಶ್ರಮವಾಗುವುದು. ಗಣಿಯ ಕೆಲಸಕ್ಕೆ ಬೇಕಾದಷ್ಟು ಜನರೂ ಸಿಕ್ಕುವುದಿಲ್ಲ. ತವರದ ಅದುರನ್ನು ಕರಗಿಸಲು ಗ್ರೇಟ್ ಬ್ರಿಟನ್ನಿಗೆ ರಫ್ತು ಮಾಡುವರು.

ಪೆಟ್ರೋಲಿಯಂ ವೆನಿಜೂಲದಲ್ಲಿ ಸಿಕ್ಕುವುದು. ಇದರ ಉತ್ಪತ್ತಿ ಯಲ್ಲ ಈ ದೇಶವು ಪ್ರಪಂಚದಲ್ಲಿ ಮೂರನೆಯದಾಗಿದೆ.

ದಕ್ಷಿಣ ಅಮೆರಿಕ ಖಂಡದ ರೈಲು ಮಾರ್ಗಗಳು ಆಫ್ರಿಕ ಮತ್ತು ಆಸ್ಟ್ರೇಲಿಯ ಖಂಡಗಳ ರೈಲು ಮಾರ್ಗಗಳನ್ನು ಹೋಲುವುವು. ರೇವು ಪಟ್ಟಣಗಳಿಂದ ರೈಲು ಮಾರ್ಗಗಳು ದೇಶಗಳೊಳಕ್ಕೆ ಹೋಗುವುವು. ಇವು ಬಹುದೂರ ಖಂಡವನ್ನೆಲ್ಲಾ ಸುತ್ತಿಕೊಂಡಿಲ್ಲ. ರೈಲು ಮಾರ್ಗಗಳು ಹೋಗುವ ಪ್ರದೇಶಗಳಲ್ಲೇ ಜನಸಾಂದ್ರತೆಯು ಹೆಚ್ಚಾಗಿರುವುದು. ಉತ್ತರ ಭಾಗದಲ್ಲಿರುವ ಕೊಲಂಬಿಯ ಮತ್ತು ವೆನಿಜೂಲದೇಶಗಳಲ್ಲಿ ಜನರು ಪ್ರಸ್ಥಭೂಮಿಗಳಲ್ಲಿ ವಾಸಮಾಡುತ್ತಾರೆ. ಇದಕ್ಕೆ ಅಲ್ಲಿನ ವಾಯು ಗುಣವೇ ಕಾರಣ.

ದಕ್ಷಿಣ ಅಮೆರಿಕವನ್ನು ಕಂಡು ಹಿಡಿಯದೆ ಹೋಗಿದ್ದರೆ ನಮಗೆ ರಬ್ಬರು, ಆಲುಗಡ್ಡೆ, ಕೋಕೊ, ಕ್ವಿನೈನ್, ಮೆಣಸಿನಕಾಯಿ, ಇವೇ ಮೊದಲಾದ ಪ್ರತಿ ದಿನವೂ ಉಪಯೋಗಿಸುವ ಪದಾರ್ಥಗಳಿಲ್ಲದೆ ಇರಬೇಕಾಗಿತ್ತು. ಇವೆಲ್ಲವೂ ಪ್ರಪಂಚದ ಇತರ ಭಾಗಗಳಿಗೆ ತರಲ್ಪಟ್ಟ ಮೇಲೆ ಅಲ್ಲಿ ದೊಡ್ಡ ಕೈಗಾರಿಕೆಗಳಿಗೆ ಮಾರ್ಗವಾಯಿತು.

# ಅಧ್ಯಾಯ ೬

## ಆಸ್ಟ್ರೇಲಿಯ

ಇದು ಖಂಡಗಳಲ್ಲೆಲ್ಲಾ ಅತ್ಯಂತ ಚಿಕ್ಕದು. ಇದರ ವಿಸ್ತೀರ್ಣ 30,00,000 ಚ. ಮೈ. ಉತ್ತರ ಅಟ್ಲಾಂಟಿಕ್ ಸಾಗರದ ದೇಶಗಳಿಗೂ ಆಸ್ಟ್ರೇಲಿಯಕ್ಕೂ 12,000 ಮೈಲಿಗಳು ದೂರವಿರುವುದರಿಂದ ಇದನ್ನು ಕಂಡು ಹಿಡಿಯಲು ತಡವಾಯಿತು; ಯೂರೋಪಿಯರ್ ಜನರು ಇಲ್ಲಿಗೆ ಬಂದು ನೆಲಸಲು ಅಡ್ಡಿಯಾಯಿತು. ಈ ಖಂಡದ ಜನಸಂಖ್ಯೆ 65 ಲಕ್ಷ. ಇಲ್ಲಿನ ಪೂರ್ವ ನಿವಾಸಿಗಳ ಸಂಖ್ಯೆಯು ಕಮ್ಮಿಯಾಗುತ್ತಿರುವುದರಿಂದ ಆಸ್ಟ್ರೇಲಿಯವನ್ನು ಯೂರೋಪಿಯರ್‌ರ ದೇಶವೆಂದೇ ಹೇಳಬಹುದು ಖಂಡದ ಉತ್ತರ ಭಾಗವು ಉಷ್ಣವಲಯದಲ್ಲಿರುವುದರಿಂದ ಅಲ್ಲಿ ಯೂರೋಪಿಯರ್‌ರು ಹೆಚ್ಚಾಗಿ ವಾಸಿಸಲು ಸಾಧ್ಯವಿಲ್ಲ. ಏಷ್ಯಾ ಖಂಡದ ಜನರು ಈ ಪ್ರದೇಶಕ್ಕೆ ಹೋಗಿ ನೆಲಸಬಹುದಾದರೂ ಅವರಿಗೆ ಆಸ್ಪದವಿಲ್ಲ.

ಹಿಂದೆ ಇಂಗ್ಲೆಂಡಿನಲ್ಲಿ ತಪ್ಪು ಮಾಡಿದವರನ್ನು ಆಸ್ಟ್ರೇಲಿಯಕ್ಕೆ ಗಡಿಫಾರು ಮಾಡುವ ಪದ್ಧತಿಯಿತ್ತು. ಆ ಕಾಲದಲ್ಲಿ ಇಂಗ್ಲೀಷ್ ಕಾಯಿದೆಗಳು ಬಹಳ ಕಠಿನವಾಗಿದ್ದುವು. 1850 ರಲ್ಲಿ ಆಸ್ಟ್ರೇಲಿಯದಲ್ಲಿ ಚಿನ್ನವು ದೊರೆಯುವುದೆಂಬ ವಿಚಾರ ತಿಳಿದ ಮೇಲೆ ಅನೇಕರು ಐಶ್ವರ್ಯವಂತರಾಗಬೇಕೆಂಬ ಆಸೆಯಿಂದ ಅಲ್ಲಿಗೆ ನುಗ್ಗಿದರು. ಎಲ್ಲರಿಗೂ ಚಿನ್ನ ದೊರೆಯಲಿಲ್ಲ. ಕೆಲವರು ಕೃಷಿಯ ಕೆಲಸವನ್ನೂ ಪಶುಪಾಲನೆಯನ್ನೂ ಕೈಕೊಂಡರು. ಈಗ ಆಸ್ಟ್ರೇಲಿಯವು ಗೋಧಿ, ಹಣ್ಣು, ಮಾಂಸ, ಕುರಿಯ ತುಪ್ಪಟ, ಬೆಣ್ಣೆ, ಕುದುರೆ ಇವುಗಳಿಗೆ ಪ್ರಖ್ಯಾತಿ ಹೊಂದಿದೆ.

ಭೂವಿವರಣೆಯ 407–9ನೆಯ ಪುಟಗಳಲ್ಲಿ ಈ ಖಂಡದ ಸಸ್ಯಗಳು ವಿವರಿಸಲ್ಪಟ್ಟಿವೆ. ಈಚೆಗೆ ರೂಢಿಗೆ ಬಂದಿರುವ ಒಂದೆರಡು ಬೆಳೆಗಳ ವಿಚಾರವನ್ನು ನಾವು ತಿಳಿಯಬೇಕಾಗಿದೆ. ಇವಾವುವೆಂದರೆ–ಕಬ್ಬು ಮತ್ತು ಹತ್ತಿ.

**ಕಬ್ಬು.**—30 ಸಾವಿರ ಎಕರೆಗಳಲ್ಲಿ ಕಬ್ಬನ್ನು ಬೆಳೆಯುತ್ತಾರೆ. ಅನ್ಯ ದೇಶಗಳಿಂದ ಆಮದಾಗುತ್ತಿದ್ದ ಸಕ್ಕರೆಯ ಮೇಲೆ ಸುಂಕವನ್ನು ಹಾಕಿ

ರುವುದರಿಂದ ಕಬ್ಬನ್ನು ಆಸ್ಟ್ರೇಲಿಯದಲ್ಲಿ ಬೆಳೆಯಲು ಸಾಧ್ಯವಾಯಿತು. ಕ್ವೀನ್ಸ್ಲೆಂಡಿನ ತೀರ ಪ್ರದೇಶದಲ್ಲಿಯೂ, ಸ್ವಲ್ಪಮಟ್ಟಿಗೆ ನ್ಯೂಸೌತ್ ವೇಲ್ಸ್‌ನಲ್ಲಿಯೂ ಕಬ್ಬು ಬೆಳೆಯುತ್ತದೆ. ತಯಾರಿಸಿದ ಸಕ್ಕರೆಯ $\frac{1}{3}$ ಭಾಗವು ರಫ್ತಾಗುತ್ತದೆ.

**ಹತ್ತಿ.**—ಆಸ್ಟ್ರೇಲಿಯದ ಉಷ್ಣ ಪ್ರದೇಶಗಳಲ್ಲಿನ ಮಣ್ಣೂ, ವಾಯು ಗುಣವೂ, ಹತ್ತಿಯ ಬೆಳೆಗೆ ಅನುಕೂಲವಾಗಿವೆ. ಸರ್ಕಾರದವರು ರೈತರಿಗೆ ಮುಫತ್ತಾಗಿ ಹಣ (Bounties) ಕೊಡುವುದರಿಂದ ಹತ್ತಿಯ ಬೆಳೆಗೆ ಪ್ರೋತ್ಸಾಹವುಂಟಾಗಿದೆ. ಈಗ ಹತ್ತಿಯ ಉತ್ಪತ್ತಿಯು ಕಡಿಮೆಯಾಗಿದ್ದರೂ ಕ್ರಮೇಣ ಹೆಚ್ಚಾಗುವ ಸಂಭವವಿರುವುದು.

**ರೈಲು ಮಾರ್ಗಗಳು.**—ನಾವು ಮೈಸೂರಿನಿಂದ ಕೋಲಾರಕ್ಕೆ ಪ್ರಯಾಣ ಮಾಡಿದರೆ ಬೆಂಗಳೂರಿನಲ್ಲಿ ಇಳಿದು ಮದರಾಸು ಕಡೆಗೆ ಹೋಗುವ ಗಾಡಿಯಲ್ಲಿ ಕುಳಿತು ಬೌರಿಂಗ್‌ಪೇಟೆಯಲ್ಲಿ ಪುನಃ ಗಾಡಿಯನ್ನು ಬದಲಾಯಿಸಿ ಸಣ್ಣ ರೈಲುಗಾಡಿಯಲ್ಲಿ ಪ್ರಯಾಣ ಮಾಡಬೇಕು. ಹೀಗೆ ಮಾಡುವುದರಿಂದ ಹೆಚ್ಚು ಕಾಲ ವಿಳಂಬವಾಗುವುದು. ಇದರಂತೆಯೇ ಆಸ್ಟ್ರೇಲಿಯದಲ್ಲಿ ಹಾಕಿರುವ ರೈಲು ಕಂಬಿಗಳ ಅಂತರವು ಬೇರೆ ಬೇರೆಯಾಗಿರುವುದರಿಂದ ಜನರ ಪ್ರಯಾಣಕ್ಕೂ ಸಾಮಾನುಗಳನ್ನೂ ಕಳುಹಿಸುವುದಕ್ಕೂ ತೊಂದರೆಯಾಗುವುದು. ಒಂದು ಖಂಡದ ವ್ಯಾಪಾರವು ಸಮರ್ಪಕವಾಗಿ ನಡೆಯಬೇಕಾದರೆ ಸಾಧ್ಯವಾದಮಟ್ಟಿಗೂ ಒಂದೇ ಅಂತರವುಳ್ಳ ರೈಲು ಮಾರ್ಗಗಳಿರುವುದು ಒಳ್ಳೆಯದು.

ಆಸ್ಟ್ರೇಲಿಯದಲ್ಲಿನ ಐದು ರಾಜ್ಯಗಳನ್ನು ಒಟ್ಟುಗೂಡಿಸಿ ಪ್ರಜಾಪ್ರಭುತ್ವವೊಂದನ್ನು ಏರ್ಪಡಿಸಿದಾರೆ. 1927 ರಲ್ಲಿ ಇದರ ಕೆಲಸಗಳನ್ನು ನಡೆಯಿಸಲು ನಮ್ಮ ದೇಶದಲ್ಲಿ ಡೆಲ್ಲಿ ಇರುವಂತೆ **ಕ್ಯಾನ್‌ಬೇರಾ** ಎಂಬ ಬೇರೆ ಪಟ್ಟಣವನ್ನು ಸ್ಥಾಪಿಸಿ ಅದನ್ನು ಕೇಂದ್ರ ಸರಕಾರದ ಮುಖ್ಯ ಪಟ್ಟಣವನ್ನಾಗಿ ಮಾಡಿದರು.

ಮಹಾ ಯುದ್ಧವಾದ ಅನಂತರ ಜನಾಂಗ ಸಂಘದ ನಿರೂಪಣೆಯಂತೆ ಪೆಸಿಫಿಕ್ ಸಾಗರದಲ್ಲಿ ಹಿಂದೆ ಜರ್ಮನಿಗೆ ಸೇರಿದ್ದ ಕೆಲವು ದ್ವೀಪಗಳನ್ನು ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡ್ ಸರ್ಕಾರದವರು ನೋಡಿಕೊಳ್ಳುತ್ತಾರೆ.

---

# ಅಧ್ಯಾಯ ೭

## ಅಂಟಾರ್ಟಿಕಾ ಖಂಡ

ಪುರಾತನ ಗ್ರೀಸಿನ ಖಗೋಳ ಶಾಸ್ತ್ರಜ್ಞರು ದಕ್ಷಿಣ ಧ್ರುವದಲ್ಲಿ ಒಂದು ಖಂಡವಿರಬೇಕೆಂದು ಸೂಚಿಸಿದ್ದರು. ಉತ್ತರ ಧ್ರುವದಲ್ಲಿ ಭೂಮಿಯಿದ್ದ ಮೇಲೆ ದಕ್ಷಿಣದಲ್ಲೂ ಅದಕ್ಕೆ ಸಮನಾಗಿ ಭೂಮಿಯಿರಬೇಕೆಂಬುದೇ ಅವರ ಊಹೆಗೆ ಕಾರಣವಾಗಿತ್ತು. 16ನೆಯ ಶತಮಾನದತನಕ ಅಂಟಾರ್ಟಿಕಾ ಖಂಡದ ವಿಚಾರವನ್ನು ಯಾರೂ ಪರಿಶೀಲನೆ ಮಾಡಲಿಲ್ಲ. 1520ರಲ್ಲಿ ಮ್ಯಾಗಿಲನ್ ಎಂಬಾತನು ತನ್ನ ಸಂಚಾರದಲ್ಲಿ ಕಂಡುಬಂದ ದಕ್ಷಿಣ ಅಮೆರಿಕದಲ್ಲಿರುವ ಟೆರಡೆಲ್‌ಫ್ಯೂಗೋ ದ್ವೀಪವೇ ಆ ಖಂಡವೆಂದು ತಿಳಿದನು. ಮುಂದೆ ಕಂಡುಹಿಡಿಯಲ್ಪಟ್ಟ ನ್ಯೂಗಿನಿ, ನ್ಯೂಹೆಬ್ರಿಡೀಸ್, ಆಸ್ಟ್ರೇಲಿಯ, ಟಾಸ್ಮೇನಿಯ ದ್ವೀಪಗಳೇ ದಕ್ಷಿಣ ಧ್ರುವದಲ್ಲಿರುವ ಖಂಡವಾಗಿರಬಹುದೆಂಬ ಅಭಿಪ್ರಾಯವಿತ್ತು. ಕೊನೆಗೆ 1772ರಲ್ಲಿ ಜೇಮ್ಸ್ ಕುಕ್ ಎಂಬ ಇಂಗ್ಲಿಷ್ ಭೂಶೋಧಕನು ದಕ್ಷಿಣದಲ್ಲಿ ಭೂಮಿಯಿಲ್ಲವೆಂದೂ, ಹಾಗಿದ್ದರೂ ಸಹಿಸಲಾರದಷ್ಟು ಚಳಿಯಿರುವೆಡೆ ಜನರು ವಾಸಮಾಡಲು ಸಾಧ್ಯವಿಲ್ಲವೆಂದೂ, ನಿದರ್ಶನ ಮಾಡಿದನು.

19ನೆಯ ಶತಮಾನದ ಪೂರ್ವಭಾಗದಲ್ಲಿ ದಕ್ಷಿಣ ಅಮೆರಿಕ ಖಂಡದ ದಕ್ಷಿಣಕ್ಕೆ ಹೋಗಿ ಸಮುದ್ರದಲ್ಲಿ ಸಿಕ್ಕುವ 'ಸೀಲ್' ಪ್ರಾಣಿಗಳನ್ನು ಬೇಟೆಯಾಡುವವರು ದೂರದಿಂದ ಈಗಿನ ಅಂಟಾರ್ಟಿಕಾ ಖಂಡದ ಭೂಭಾಗವನ್ನು ಕಂಡರು. ಅನಂತರ ಅದರ ಪ್ರದೇಶಗಳ ಪರಿಶೋಧನೆಯ ಕೆಲಸವು ಹೆಚ್ಚಾಗಿ ಮುಂದುವರಿಯಲಿಲ್ಲ. ಈಚೆಗೆ ಅಲ್ಲಿಯ ಸ್ಥಿತಿಯನ್ನು ತಿಳಿಯುವುದು ಅತ್ಯಾವಶ್ಯಕವೆಂದು ಕೆಲವು ಯೂರೋಪಿಯರ್ನರು ಹೋಗಿಬರುವ ಸಾಹಸ ಕಾರ್ಯಕ್ಕೆ ತೊಡಗಿದರು. ಇವರಲ್ಲಿ ಅಮನ್ಡ್‌ಸನ್, ಸ್ಕಾಟ್ ಎಂಬುವರು ಮುಖ್ಯ ಪುರುಷರು. ಅಮೆರಿಕದ ಬರ್ಡ್ ಎಂಬಾತನು

1929ರಲ್ಲಿ ವಿಮಾನದಲ್ಲಿ ಹೋಗಿ ಅಲ್ಲಿನ ಪ್ರದೇಶಗಳ ಸ್ಥಿತಿಯನ್ನು ತಿಳಿದು ಹಿಂತಿರುಗಿದನು. ಇನ್ನೂ ಪರಿಶೋಧನೆಯ ಕೆಲಸ ನಡೆಯಬೇಕಾಗಿದೆ. ಇದುವರೆಗೂ ಪರಿಶೋಧನೆಯಾಗಿರುವ ಭಾಗಗಳಿಗೆ ಆಯಾ ಭೂಶೋಧಕರು ಬೇರೆ ಬೇರೆ ಹೆಸರುಗಳನ್ನು ಕೊಟ್ಟಿರುತ್ತಾರೆ.

## ಸ್ವಾಭಾವಿಕ ಲಕ್ಷಣಗಳು

ಅಂಟಾರ್ಟಿಕಾ ಖಂಡವು 50 ಲಕ್ಷ ಚದರ ಮೈಲಿ ವಿಸ್ತೀರ್ಣವುಳ್ಳದ್ದಾಗಿದೆ. ಇದರ ಅರ್ಧ ತೀರಪ್ರದೇಶ ಮಾತ್ರ ಕಂಡುಬಂದರೂ ಭೂಮಿಯು ಅಖಂಡವಾಗಿರಬೇಕೆಂದು ತಿಳಿಯಬಂದಿದೆ.

ಈ ಖಂಡವೆಲ್ಲಾ ಮಂಜುಗಡ್ಡೆಯಿಂದ ತುಂಬಿದೆ. ಇದು ಸಮುದ್ರ ಮಟ್ಟಕ್ಕಿಂತ 10,000 ಅಡಿ ಎತ್ತರವಾಗಿದೆ. ಹಿಂದಿನ ಕಾಲದಲ್ಲಿ ಮಂಜುಗಡ್ಡೆಯು ಪ್ರಾಯಶಃ ಹೆಚ್ಚು ದಟ್ಟವಿದ್ದಿರಬೇಕು.

ವರ್ಷವೆಲ್ಲಾ ಚಳಿಯೇ ಹೆಚ್ಚು. ಸುಮಾರು 8 ರಿಂದ 12 ಅಂಗುಲ ಮಳೆ ಹಿಮರೂಪವಾಗಿ ಬೀಳುವುದು.

ಮಣ್ಣು ಕಡಿಮೆಯಾಗಿರುವುದರಿಂದಲೂ ಬೇಸಿಗೆಯಲ್ಲಿ ಕೂಡ ಸಾಕಾದಷ್ಟು ಶಾಖವಿಲ್ಲದಿರುವುದರಿಂದಲೂ ಸಸ್ಯಗಳು ಬೆಳೆಯಲು ಸಾಧ್ಯವಿಲ್ಲ. ಉತ್ತರ ಧ್ರುವದ ಭೂಭಾಗದಲ್ಲಿ ಸಿಕ್ಕುವಂತೆ ಇಲ್ಲಿಯೂ ಪಾಚಿ, ಶಿಲಾವಲ್ಕ ಮತ್ತು ಸಮುದ್ರದ ಜೊಂಡು ಇವು ಬೆಳೆಯುವುವು.

ಸಮುದ್ರದಲ್ಲಿ ಅನೇಕ ಪ್ರಾಣಿಗಳಿರುವುವು. ವಿಧವಿಧವಾದ ಪಕ್ಷಿಗಳು ಬೇಸಗೆಯಲ್ಲಿ ಅಂಟಾರ್ಟಿಕಾ ಖಂಡಕ್ಕೆ ಬರುವುವು. ಇಲ್ಲಿ ಸಿಕ್ಕುವ 'ಸೀಲ್' ಪ್ರಾಣಿಯ ಚರ್ಮವು ಉಡುಪಿಗೆ ಯೋಗ್ಯವಾಗಿಲ್ಲ. ಬೇಟೆಗಾರರ ಕಾಟದಿಂದ ತಿಮಿಂಗಿಲ (Whale)ಗಳ ಸಂಖ್ಯೆಯು ಕಡಿಮೆಯಾಗಿದೆ.

ಒಂದುವೇಳೆ ಈ ಖಂಡದಲ್ಲಿ ಖನಿಜಗಳು ದೊರೆತರೂ ಅವುಗಳನ್ನು ತೆಗೆಯಲು ಸಾಧ್ಯವಿಲ್ಲ. ಇಲ್ಲಿನ ವಾಯುಗುಣವು ಕೆಲಸ ಮಾಡುವದಕ್ಕೂ ಸಾಮಾನುಗಳನ್ನು ಸಾಗಿಸುವದಕ್ಕೂ ಪ್ರತಿಕೂಲವಾಗಿದೆ. ತಿಮಿಂಗಿಲಗಳನ್ನು ಕೊಂದು ಅವುಗಳ ಎಣ್ಣೆಯನ್ನು ತೆಗೆಯುವದೊಂದೇ ಉದ್ಯೋಗ. ಕೆಲವು ನಾರ್ವೆ ಮತ್ತು ಬ್ರಿಟಿಷ್ ಕಂಪನಿಗಳು ಈ ಕೆಲಸದಲ್ಲಿ ಉದ್ಯುಕ್ತಗಳಾಗಿವೆ.

ತಿಮಿಂಗಿಲಗಳನ್ನು ಹಿಡಿಯುವದಕ್ಕೆ ಸೌಕರ್ಯಗಳಿರುವುದರಿಂದ ಇಂಗ್ಲಿಷರೂ, ನ್ಯೂಜಿಲೆಂಡ್ ದೇಶದವರೂ, ಫ್ರೆಂಚರೂ, ನಾರ್ವೆ ದೇಶದವರ ಈ ಖಂಡದ ಕೆಲವು ಭಾಗಗಳು ತಮತಮಗೆ ಸೇರಿದುವೆಂದು ಹಕ್ಕನ್ನು ಸ್ಥಾಪಿಸುತ್ತಿರುವರು. ಆದರೆ ಯಾವ ಭಾಗದಲ್ಲಿಯೂ ರಾಜ್ಯಭಾರದ ಸಲುವಾಗಿ ಯಾರೂ ವಾಸಮಾಡುತ್ತಾ ಇಲ್ಲ. ಬೇಸಿಗೆಯಲ್ಲಿ ಮಾತ್ರ ತಿಮಿಂಗಿಲಗಳನ್ನು ಹಿಡಿಯಲು ಜನರು ಬರುವರು.

---

WD 583—GPB- -10,000—4-1-34